


# ಹಿಂಗಾರ



ಅರೆಬಾಸೆ ತ್ರೈಮಾಸಿಕ

ಸಂಪುಟ : 4 ಸಂಚಿಕೆ : 6 ದಿನಾಂಕ : 31-03-2021 ಬೆಲೆ : ರೂ. 20

ಜನವರಿ-ಫೆಬ್ರವರಿ-ಮಾರ್ಚ್ 2021



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
**ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 4 ಸಂಚಿಕೆ : 6

ದಿನಾಂಕ : 31–03–2021 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi Mathu Sahitya Academy** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮಿನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Thekkade Kumarswamy** | **ತೆಕ್ಕಡೆ ಕುಮಾರಸ್ವಾಮಿ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copis : 1500 | ಪ್ರತಿಗಳು : 1500 |
| Vol : 4 - 6 | ಸಂಪುಟ 4 ಸಂಚಿಕೆ 6 |
| Period : January to March | ಜನವರಿ – ಮಾರ್ಚ್ |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ

ಜನವರಿ ತಿಂಗಲಿ ನಾವು ಮತ್ತೆ ನಿಮ್ಮೊಟ್ಟಿಗೆ ಮತ್ತೊಂದು ಹಿಂಗಾರ ಸಂಚಿಕೆ ಹಿಡ್ಕಂಡ್ ನಮ್ಮ ಯೋಜನೆಗ, ಯೋಚನೆಗಳ್ನ ನಿಮ್ಮ ಮುಂದೆ ಹಂಚಿಕಣಿಕೆ ಬಂದು ನಿತ್ತೊಳೊ. ನಿಮಿಗೆಲ್ಲವುಕೆ ಗೊತ್ತಿರುವಂಗೆ ಡಿಸೆಂಬರ್ಲಿ ನಮ್ಮ ಸಾಹೇಬ್ರು ಬಂದವೇ ಅರೆಬಾಸೆ ನಾಟಕ ಸುಳ್ಯಲಿ ಮೊದಲ ಪ್ರದರ್ಶನ ಕಂಡ ಮೇಲೆ ಜನವರಿ ತಿಂಗಂದ ನಮ್ಮ ರಂಗಪಯಣ, ಬೆಂಗಳೂರು, ಶಿವಮೊಗ್ಗ, ತೀರ್ಥಹಳ್ಳಿ, ಕುಂದಾಪುರ, ಮೈಸೂರು, ಮಂಗಳೂರು, ಹಿಂಗೆ ರಾಜ್ಯದ ಬೇರೆ ಬೇರೆ ಕಡೆಗಳ್ಲಿ ತೆರೆಕಂಡ್ ಅದ್ದಾಕಷ್ಟ ಜನಪ್ರಿಯತೆನ ಕೂಡಕಂಡತ್. ಮೂಡಬಿದಿರೆಯಲಿ ನಡ್ದ ನಾಟಕ ಪ್ರದರ್ಸನಲಿ ಎರಡು ದಿನ ಕೂಡ ಸಾವಿರಕ್ಕಿಂತ ಹೆಚ್ಚ್ ಪ್ರೇಕ್ಷಕರ್ ಸೇರಿದ್ದೋ. ಅದೂ ರಾಜ್ಯದ ಬೇರೆ ಬೇರೆ ಕಡೆಂದ ಬಂದ ಜನಸಮೂಹನೇ ಅದ್ಕೆ ಸಾಕ್ಷಿ. ನಾಟಕಲಿ ಅಭಿನಯಿಸಿದ ಯಾವ ನಟರೂ ಕೂಡ ವೃತ್ತಿಪರ ನಟಂಗ ಅಲ್ಲ. ಹಳ್ಳಿಯ ಪ್ರತಿಭೆಗಳಿಗೆ ರಂಗವೇದಿಕೆನ ಕಲ್ಪಿಸಿಕೊಟ್ಟು ಅವರ ಪ್ರತಿಭೆನ ಹೊರತಾಕೆ ಈ ವೇದಿಕೆ ಮೂಲಕ ಸಾಧ್ಯ ಆವುಟುಂತೇಳುದು ನಿಜಕ್ಕೂ ನಮಿಗೆ ಕುಸಿನ ಸಂಗತಿ. ರಾಜ್ಯದ ಬೇರೆ ಬೇರೆ ಕಡೆ ಈ ನಾಟಕ ಪ್ರದರ್ಸನ ಕಂಡ ಕಾರಣ, ಅರೆಬಾಸೆಂತೇಳುವ ಒಂದು ಬಾಸೆ ಉಟ್ಟುಂತೇಳುವಂತದ್ದು ಎಲ್ಲವುಕೆ ಗೊತ್ತಾವುಟು.

ಪೆಬ್ರವರಿ ತಿಂಗಳ್ಲಿ ಕಾರವಾರಲಿ ಬ್ಯಾರಿ ಭಾಷಾ ಅಕಾಡೆಮಿಂದ ನಡ್ದ ಬಹುಭಾಶಾ ಸಾಂಸ್ಕೃತಿಕ ಸಂಭ್ರಮಲಿ ನಾವೂ ಕೂಡ ಪಾಲ್ಗೊಂಡಿದ್ದೊ. ಎಲ್ಲಾ ಭಾಷಾ ಮತ್ತು ಸಂಸ್ಕೃತಿ ಅಕಾಡೆಮಿಗಳ ಸಮ್ಮಿಲನ ಆತ್ ಅಲ್ಲಿ. ಅವರವರ ಸಂಸ್ಕೃತಿನ ಪರಿಚಯಿಸುವ ನಿಟ್ಟ್‌ಲಿ ಕಾರ್ಯಕ್ರಮ ನಡ್ತ್. ಪುರುಷೋತ್ತಮ ಕಿರ್ಲಾಯ ಮಾಡ್ದ ಅರೆಬಾಸೆ ಸಂಸ್ಕೃತಿ ಪರಿಚಯ ಮತ್ತೆ ಪ್ರೇಮ ರಾಘವಯ್ಯ ಅವರ ಲಾವಣಿಪದ ಜನಮೆಚ್ಚುಗೆ ಪಡ್ದತ್. ಅರೆಭಾಷೆ ಕವಿತೆ ವಾಚನನ ಸ್ಮಿತಾ ಅಮ್ಮತರಾಜ್‌ವು ಮಾಡ್ದೊ. ಅದೇ ವೇದಿಕೇಲಿ ನಮ್ಮ ಅರೆಬಾಸೆ ಸಂಸ್ಕೃತಿ ಬಗ್ಗೆ ಸಾಕಷ್ಟ್ ಅಭಿಮಾನ ಇಟ್ಟಂಡ್ ಕೆಲ್ಸಮಾಡುವ ಬಹುಮುಖ ಪ್ರತಿಭೆ ಮಿಲನಭರತ್ ಅವ್ಕೆ ಸಮ್ಮಾನ ಕೂಡ ನಡ್ದತ್. ಅದಾದ ಮೇಲೆ ಮಡಿಕೇರಿಲಿ ಏಳ್ ದಿನದ ಸಾಂಸ್ಕೃತಿಕ ಶಿಬಿರ ಹಮ್ಮಿಕಂಡ್ ಅಲ್ಲಿ ಅರೆಬಾಸೆ ಸಂಸ್ಕೃತಿಯ ಸೋಬಾನೆ ಪದಗಳ ಒಂದು ಕಾರ್ಯಕ್ರಮ ಹಮ್ಮಿಕಂಡೊ. ನಮ್ಮ ಸಂಸ್ಕೃತಿಯ ನಿಜವಾದ ವಾರಸುದಾರರು ಹೆಣ್ಮಕ್ಕ. ಸಾಕಷ್ಟು ಹೆಣ್ಮಕ್ಕ ಬಾರೀ ಆಸಕ್ತಿಲಿ ಬಂದ್ ಅದರ ಪ್ರಯೋಜನನ ಪಡ್ಕಂಡೊ. ಹಂಗೆನೆ ಅರೆಬಾಸೆಲಲಿತ ಪ್ರಬಂಧ ಸ್ಪರ್ಧೆ ಆಯೋಜನೆ ಮಾಡಿಯೊಳೊ. ಅದ್ಕೆ ಒಳ್ಳೆ ರೀತಿಯ ಸ್ಪಂದನೆ ಕೂಡ ಸಿಕ್ಕಿಟು. ಸಾಕಷ್ಟ್ ಮಟ್ಟಿಗೆ ಪ್ರಬಂಧಗ ಬಂದೊಳೊ. ಬರೆವ ಉತ್ಸಾಹ ನಮ್ಮ ಅರೆಬಾಸಿಗರ್ಲಿ ಉಟ್ಟುಂತೇಳ್ವಂತದ್ದು ಇಲ್ಲಿ ಗೊತ್ತಾದೆ. ಬರಹಲಿ ಪಳ್‌ಂಗೋಕುತಾದರೆ ನಾವ್‌ಗೆ ವಿಭಿನ್ನ ಪ್ರಕಾರದ ಓದು ಕೂಡ ಮುಖ್ಯ ಆದೆ. ಅದಕ್ಕಾಗಿಯೇ ಈ ಸಲದ ಹಿಂಗಾರಲಿ ಬನ್ನಿ ಓದೋಮೊ ವಿಭಾಗಲಿ ಕತೆಗಾರ ಜೋಗಿಯವರ ಒಂದು ಅಂಕಣಬರಹ ಹಾಕಿಯೊಳೊ. ನೀವ್ಗೆಲ್ಲ ಇಷ್ಟ ಆದುಂತ ಅಂದ್ಕಂಡವೆ. ಹಂಗೆನೇ ಯಾಗೊಳ್ನಾಂಗೆ ಎಲ್ಲವುಕೆ ಅವಕಾಸ ಕೊಡುವ ನಿಟ್ಟ್‌ಲಿ ನಿಮ್ಮೆಲ್ಲರ ಬರಹಗಳ್ನ ಹಾಕಂಡ್ ಹಿಂಗಾರ ಬಂದುಟು. ಮತ್ತದೇ ಪ್ರೀತಿಂದ ನೀವು ನಮ್ಮೊಟ್ಟಿಗೆ ಒಳರಿ ತೇಳುವ ಭರವಸೆ ನಾವ್‌ಗೆ ಕೆಲ್ಸ ಮಾಡಿಕೆ ಮತ್ತಷ್ಟ್ ಮನ್ಸ್ ಕೊಟ್ಟದೆ.

ಶುಭಹಾರೈಕೆಗಳೊಟ್ಟಿಗೆ

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕರ ಮಾತ್

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ  ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರ್‍ರಾಗಿ, ನಿರಂತರ ಓದಿಕಂಡ್, ಮೌಲ್ಯದ ಬರಹಗಳ್ನ ಮತ್ತೆ ಒಳ್ಳ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮಿಗೆ ನಮಸ್ಕರಿಸಿನೆ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ಐದನೇ ಸಂಚಿಕೆ. ಈ ಸಂಚಿಕೆಲಿ 2021ರ ಜನವರಿಂದ ಮಾರ್ಚ್ ತಿಂಗಳ್ನವರೆಗಿನ ಸಂಗತಿಗಳ್ನ ಒಟ್ಟ್ ಸೇರ್ಸಿಯೊಳೊ. ಈ ಸಂಚಿಕೆ ಮಾರ್ಚ್ ತಿಂಗಳ್‌ಲಿ ಪ್ರಕಟ ಆಕಾಗಿತ್. ಆದ್ರೆ ಕೆಲವೊಂದ್ ಕಾರಣಂದ ಸಂಚಿಕೆನ ಸರಿಯಾದ ಸಮಯಕ್ಕೆ ಹೊರತಾಕೆ ಆತ್ಲೆ. ಅದಕ್ಕಾಗಿ ಚಂದಾದರರ್, ಓದ್‌ಗರ್ ಮತ್ತೆ ಬರಹಗಾರರ್ಲಿ ಕ್ಷಮೆ ಕೇಳ್ತೊಳೆ. ಇನ್ನ್ ಸರಿಯಾದ ಸಮಯಲಿ ತ್ರೈಮಾಸಿಕನ ಪ್ರಕಟಿಸಿ ನಿಮ್ಮ ಕೈಗೆ ಸಿಗುವಂಗೆ ಪ್ರಯತ್ನ ಪಟ್ಟವೆಂತ ಭರವಸೆ ಕೊಟ್ಟನೆ.

ಈ ಸಂಚಿಕೆಲಿ ಬಾಸ್ಕೆಟ್‌ಬಾಲ್ ಯುವರಾಣಿ ಪಟ್ಟೆಮನೆ ನವನೀತನ ಕೂಡಕಂಡಿ ಓಂಶ್ರೀ ದಯಾನಂದನವು  ಮಾಡ್ಯೊಳೊ. ಸಂಸ್ಕೃತಿ ದರ್ಪಣಲಿ ಹೋದಲೆಲ್ಲ ಸಾಹೇಬ್ರು ಜಯಬೇರಿಂತೇಳುವ ಬರವಣಿಗೆನ ಜಯಪ್ರಕಾಶ್ ಕುಕ್ಕೇಟಿವು ಮತ್ತೆ ಎಂ.ಜಿ.ಕಾವೇರಮ್ಮನವರ ಅಂಗಾರನ ಕಲ್ಲ್‌ಂತೇಳುವ ಲೇಖನನ ಪ್ರಕಟಿಸ್ಯೊಳೊ. ಅನುಭವ ವಿಭಾಗಲಿ ಪಿ.ಜಿ.ಅಂಬೆಕಲ್‌ವು ಕೊರೊನಾಕ್ಕೊಂದು ನಮಸ್ಕಾರಂತೇಳುವ ಅನುಭವನ ಹಂಚಿಕೊಂಡೊಳೊ. ಶ್ರೀಮತಿ ಶಿವದೇವಿ ಅವನೀಶ್‌ಚಂದ್ರರ ಮನೆ ಮುಂದೆನ ಭಾವ ಜಗತ್ತ್‌ನ ರಂಗೋಲಿಂತೇಳುವ ವೈಚಾರಿಕ ಲೇಖನನ  ಪ್ರಕಟಿಸ್ಯೊಳೊ.

ಕತಾ ಜೊಂಪೆ ವಿಭಾಗಲಿ ದೀಕ್ಷಾ ಕೆ ಐವರ್ನಾಡು ಇವರ ಮಾನವೀಯತೆನ ಬೆಲೆ ಮತ್ತೆ ಪುರಾಣ ಕತಾ ಜೊಂಪೆಲಿ ಕುಂಇಟಿ ಶಿವರಾಮ ಗೌಡ (ವ್ಯಾಸ)ರ ಕಚ–ದೇವಯಾನಿ ಪುರಾಣ ಕತೆನ

ಪ್ರಕಟಿಸ್ಯೊಳೊ. ಹರಟೆ ಮತ್ತೆ ಹಾಸ್ಯ ವಿಭಾಗಲಿ ಹೊಳೆಕರೆ ಚೆಂಗಪ್ಪವರ ಗೌಜಿ ಗಮ್ಮತ್‌ಂತೇಳುವ ಹಾಸ್ಯ ಬರಹನ ಮತ್ತೆ ಕಾವೇರಿಮನೆ ಡಾ.ಬೋಜಪ್ಪನವು ಬರ್ದ ಹಳ್ಳಿ ಹೈದನ ಬ್ಯಾಟೆಗಂತೇಳುವ ಹಾಸ್ಯ ಬರಹನ ಪ್ರಕಟಿಸ್ಯೊಳೊ. ಕವನ ವಿಭಾಗಲಿ ಬೈಲೇರ ಭಾನು ಅಶೋಕ್ ಅವರ 'ನಾವಿರೊಕು ಇವನಂಗೆ', ಸೀತಾರಾಮ ಕೇವಳರ 'ತೊಟ್ಟಿಲ ಹಾಡು', ಪ್ರೀತಮ್ ಎ.ಜಿ.ರ 'ಹಿಂಗಾರ' ಮತ್ತೆ ಬಡುವಂಡ್ರಂತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮಂತೇಳುವ ಅಂಕಣಲಿ ಕಲ್ಲುಳಿ ವಿಠಲ ಹೆಗಡೆಯವರ 'ಮಂಗನ ಬ್ಯಾಟೆ' ಅಂತೇಳುವ ಪುಸ್ತಕದ ಕಂಡಿಕೆನ ಪ್ರಕಟಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ಮುಖಪುಟ ಚಿತ್ರ ಬೋಗುಣಿನ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಈ ಸಂಚಿಕೆಲಿ ಪ್ರಕಟ ಆದ ಬರವಣಿಗೆಗೆ ಚಿತ್ರಕಲಾವಿದ ಪ್ರಸನ್ನ ಐವರ್ನಾಡು ಇವು ಗೆರೆಗಳ ಮೂಲಕ ಜೀವ ತುಂಬ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣಿಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಹೆಚ್ಚ್‌ಸಿಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕ ಪುರುಷೋತ್ತಮ ಕಿರ್ಲಾಯವು ಮತ್ತೆ ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ಮುಖಪುಟಕೆ ಚಿತ್ರ ನೀಡ್ಯೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 31.03.2021

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್

## ಹಿಂಗಾರ ಒಡ್ಸ್‌ಕನ




# ಬಾಸ್ಕೆಟ್‌ಬಾಲ್ ಯುವರಾಣಿ ಪಟ್ಟೆಮನೆ ನವನೀತ

●

ಓಂಶ್ರೀ ದಯಾನಂದ, ಕೂಡಕಂಡಿ

ನಮ್ಮ ಜನಾಂಗದ ಕ್ರೀಡಾ ಕ್ಷೇತ್ರದ ಹೆಮ್ಮೆಯ ಮಗ್‌ಳ್ ಪಟ್ಟೆಮನೆ ನವನೀತ. ಇವು ಸಣ್ಣ ಪ್ರಾಯಲಿ ಬಾಸ್ಕೆಟ್‌ಬಾಲ್ ಕ್ರೀಡೆಲಿ ತುಂಬಾ ಹೆಸರ್ ಮಾಡ್ಕಂಡ್ ನಮ್ಮ ಜನಾಂಗದ ಕೀರ್ತಿನ ಹೆಚ್ಚಿಸ್ತೊಳೊ. ನವನೀತ ಇವು ಸೋಮವಾರಪೇಟೆ ತಾಲ್ಲೂಕು, ಸುಂಠಿಕೊಪ್ಪ ನಾಡ್ನ ಉಲುಗುಲಿ ಗ್ರಾಮದ ಕೃಷಿಕ ದಂಪತಿ ಪಟ್ಟೆಮನೆ ಉದಯ ಕುಮಾರ ಮತ್ತೆ ಗಿರಿಜರವರ ಎರಡ್ನೆ ಮಗಳ್. ಇವು ಎಲ್.ಕೆ.ಜಿಂದ ಏಳನೇ ತರಗತಿವರೆಗೆ ಸಂತ ಮೇರಿ ಆಂಗ್ಲ ಮಾಧ್ಯಮ ಶಾಲೆ, ಸುಂಠಿಕೊಪ್ಪಲಿ ಓದಿಯ್ಯೊಳೊ ಮತ್ತೆ ಕ್ರೀಡೆಲಿ ಬಾರಿ ಖುಷಿ ಇದ್ದರ್‌ಂದ 8ನೇ ತರಗತಿಂದ 10ನೇ ತರಗತಿವರೆಗೆ ಬೆಂಗಳೂರ್ನ ದೇವನಹಳ್ಳಿಯ ವಿದ್ಯಾನಗರದ ಡಿ.ವೈ.ಇ.ಎಸ್ ಕ್ರೀಡಾ ಶಾಲೆಲಿ ಓದಿದೊ. ಡಿ.ವೈ.ಇ.ಎಸ್ ಕ್ರೀಡಾ ಶಾಲೆನ ಜೂನಿಯರ್ ತರಬೇತಿದಾರ ಗಿರೀಶ್‌ರವರ ಮಾರ್ಗದರ್ಶನಂದ ಅವುಕ್ಕೆ ಕ್ರೀಡಾ ಕ್ಷೇತ್ರಲಿ ಸಾಧನೆ ಮಾಡಿಕೆ ಆಗುಟು ಮತ್ತೆ ಅವು ಕ್ರೀಡೆಲಿ ಬೆಳ್ಯಕೆ ಮೊದಲ ದೇವರುಂತ ನವನೀತನವು ಹೇಳಿವೆ. ಪದವಿ ಪೂರ್ವ ಶಿಕ್ಷಣನ ಕಲಾ ವಿಭಾಗಲಿ ಮೈಸೂರು ಮರಿಮಲ್ಲಪ್ಪ ಕಾಲೇಜ್‌ಲಿ ಮಾಡ್ದೊ. ಅಲ್ಲಿ ಇವುಕ್ಕೆ ಪಾಟೇಲ್ ಅಂತೇಳುವ ತರಬೇತಿದಾರ ಸಿಕ್ಕಿ ಕ್ರೀಡೆಲಿ ಇನ್ನೂ ಹೆಚ್ಚು ಬೆಳ್ಯಕೆ ಆತ್. ಇವು ಮೈಸೂರ್ನ ಕ್ರೀಡಾ ಹಾಸ್ಟೇಲ್ಗೆ ಸೇರಿ,






ಬ್ಯಾರೆ ಬ್ಯಾರೆ ರಾಜ್ಯಗಳಿಗೆ ತರಬೇತಿಗೆ ಹೋಗ್ತಿದೊ. ಪದವಿ ಶಿಕ್ಷಣನ ಮೈಸೂರ್ನ ಟೆರಿಷನ್ ಕಾಲೇಜ್ಲಿ ಮುಗ್ಸಿದೊ. ಮತ್ತೆ ಸಮಾಜಶಾಸ್ತ್ರಲಿ ಸ್ನಾತಕೋತ್ತರ ಪದವಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವ ವಿದ್ಯಾಲಯ, ಮೈಸೂರ್‌ಂದ ಪಡ್ಕೊಂಡೊ. ಇವು 2015ರ್‌ಂದ ಭಾರತೀಯ ರೈಲ್ವೆ ಇಲಾಖೆಲಿ ಉದ್ಯೋಗ ಮಾಡ್ತೊಳೊ. ರೈಲ್ವೆ ಇಲಾಖೆನ ತರಬೇತಿದಾರ ಜರೀನ್‌ರಿಂದ ತರಬೇತಿ ತಕಂಡ್ ಬ್ಯಾರೆ ಬ್ಯಾರೆ ದೇಶಲಿ ನಮ್ಮ ದೇಶನ ಪ್ರತಿನಿಧಿಸ್ತೊಳೊ. ಇವು ಫೀಬಾ ಏಷ್ಯನ್ ಕಫ್‌ಲಿ ಗೆದ್ದ್ ನಮ್ಮ ದೇಶದ ತ್ರಿವರ್ಣ ಧ್ವಜನ ಹಿಡ್ದು ನಮ್ಮ ಜನಾಂಗ ಮತ್ತೆ ನಮ್ಮ ದೇಶದ ಕೀರ್ತಿನ ಪತಾಕೆನ ಅಂತರಾಷ್ಟ್ರೀಯ ಮಟ್ಟಕ್ಕೆ ಹಾರಿಸ್ಯೊಳೊ. ಇವು ಬಾಸ್ಕಟ್‌ಬಾಲ್ ಕ್ರೀಡೆಲಿ ನಮ್ಮ ದೇಶನ ಬಾಳಷ್ಟ್ ಸಲ ಪ್ರತಿನಿಧಿಸಿ ಹಲವಾರ್ ಪ್ರಶಸ್ತಿನ, ಬಹಮಾನನ, ಪಡ್ಕೊಂಡೊಳೊ. ಕುಲದೇವರು ವೆಂಕಟರಮಣ ಸ್ವಾಮಿ, ಕ್ರೀಡೆಲಿ ಇವು ಇನ್ನೂ ಹೆಚ್ಚಿನ ಸಾಧನೆ ಮಾಡಿಕೆ ನವನೀತಂಗೆ ಮತ್ತೆ ಅವಳ ಕುಟುಂಬಕ್ಕೆ ಸುಖ, ಶಾಂತಿ, ಆರೋಗ್ಯ, ನೆಮ್ಮದಿ, ಐಶ್ವರ್ಯನ ನೀಡಿ ಆಶೀರ್ವದಿಸಲಿ ಮತ್ತೆ ಅವರ ಕುಟುಂಬ ಹಾಂಗೆ ನಮ್ಮ ಜನಾಂಗದ ಕೀರ್ತಿನ ಹೆಚ್ಚಿಸಲಿ ಅಂತ ಹಾರೈಸೋನ.

**ಪ್ರಶಸ್ತಿಗ:**

ಕ್ರೀಡೆಲಿ ಇವರ ಸಾಧನೆನ ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರ 2012ರ್‌ಲಿ ಕರ್ನಾಟಕ ಓಲಂಪಿಕ್ ಪ್ರಶಸ್ತಿನ ನೀಡಿ ಗೌರವಿಸ್ಯೊಳೊ.

ಬಾಸ್ಕೆಟ್ ಬಾಲ್ ಕ್ರೀಡೆಲಿ ಇವರ ಸಾಧನೆನ ಪರಿಗಣಿಸಿ ಭಾರತ ಸರ್ಕಾರ 2014ರ್‌ಲಿ ಇವ್ಳಿಗೆ ಪ್ರತಿಷ್ಠಿತ ಏಕಲವ್ಯ ಪ್ರಶಸ್ತಿ ನೀಡಿ ಗೌರವಿಸಿಟು.

2020ರ ಫೆಬ್ರವರಿಲಿ ಸಂಗಯ್ಯನಪುರ, ಆಲೂರು ಸಿದ್ದಾಪುರಲಿ ನಡ್ದ 2ನೇ ಅರೆಭಾಷೆ ಸಾಹಿತ್ಯ ಸಮ್ಮೇಳನಲಿ ಇವಳನ್ನ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನವು ಗೌರವಿಸ್ಯೊಳೊ.

ನವನೀತವು ಕೊಡಗು ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್, ಕೊಡಗು ಗೌಡ ವಿದ್ಯಾ ಸಂಘ, ಹೀಂಗೆ ಬೇರೆ ಬೇರೆ ಸಂಘ, ಸಂಸ್ಥೆ, ಸಮಾಜದ ಸನ್ಮಾನ, ಗೌರವ, ಪ್ರಶಂಸನ್ನೆಗಳ್ನ ಪಡ್ಕೊಂಡೊಳೊ.

**ನವನೀತರ ಅಂತರಾಷ್ಟ್ರೀಯ ಮಟ್ಟದ ಸಾಧನೆಗ:**

- 2018–19ರ್‌ಲಿ ನೇಪಾಳಲಿ ನಡ್ದ ಸೌತ್ ಏಷಿಯನ್ ಗೇಮ್‌ನ ಪ್ರತಿನಿಧಿಸಿ ಚಿನ್ನದ ಬಹುಮಾನ ಪಡ್ಕೊಂಡೊ.
- 2018–19ರ್‌ಲಿ ಮಲೇಷ್ಯಾಲಿ ಫ್ರೀ ಒಲಂಪಿಕ್ ಕ್ವಾಲಿಫೈರ್‌ಸ್‌ಲಿ ಭಾಗವಹ್ಸಿಳೊ.

- 2018–19ರ್‌ಲಿ ಬೆಂಗಳೂರ್ಲಿ ನಡ್ಡ ಫೀಭಾ ಮಹಿಳಾ ಏಷಿಯನ್ ಕಫ್ ಲಿ ಭಾಗವಹ್ಸಿಳೊ.
- 2017–18ರ್‌ಲಿ ಆಸ್ಟ್ರೇಲಿಯಾದ ಗೋಲ್ಡ್‌ಕೋಸ್ಟ್‌ಲಿ ನಡ್ದ ಕಾಮನ್‌ವೇಲ್ತ್ ಗೇಮ್ಸ್‌ಲಿ ಭಾಗವಹಿಸಿದೊ.
- 2016–17ರ್‌ಲಿ ಬೆಂಗಳೂರ್ಲಿ ನಡ್ಡ ಫೀಬಾ ಕಫ್‌ಲಿ ಭಾಗವಹಿಸಿ ಗೆದ್ದೊಳೊ.
- 2016–17ರ್‌ಲಿ ಥೈವಾನ್‌ಲಿ ನಡ್ದ ವಿಲಿಯಂ ಜೋನ್ಸ್ ಕಫ್‌ಲಿ ಭಾಗವಹ್ಸಿಳೊ.
- 2009–10ರ್‌ಲಿ ಪುಣೆಲಿ ನಡ್ದ ಅನ್ಡರ್ 16 ಫೀಬಾ ಏಷಿಯಾ ಕಫ್‌ಲಿ ಭಾಗವಹ್ಸಿಳೊ.

**ರಾಷ್ಟ್ರ ಮಟ್ಟದ ಪದಕಗ:**

- 2019–20ರ್‌ಲಿ ಲೂದಿಯಾನಲಿ ನಡ್ದ 70ನೇ ಭಾರತೀಯ ರೈಲ್ವೆನ ನ್ಯಾಷನಲ್ ಸಿನಿಯರ್ ಚಾಂಪಿಯನ್‌ಸಿಪ್‌ಲಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕನ ಪಡ್ಕೊಂಡೊಳೊ.
- 2018–19ರ್‌ಲಿ ಗುಜರಾತ್‌ನ ಬಾವನಗರ್ಲಿ ನಡೆದ 69ನೇ ಭಾರತೀಯ ರೈಲ್ವೆನ ನ್ಯಾಷನಲ್ ಸಿನಿಯರ್ ಚಾಂಪಿಯನ್‌ಸಿಪ್‌ಲಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕನ ಪಡ್ಕೊಂಡೊಳೊ.
- 2017–18ರ್‌ಲಿ ಚೆನ್ನೈಲಿ ನಡ್ದ 68ನೇ ಭಾರತೀಯ ರೈಲ್ವೆನ ನ್ಯಾಷನಲ್ ಸಿನಿಯರ್ ಚಾಂಪಿಯನ್‌ಸಿಪ್‌ಲಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕನ ಪಡ್ಕೊಂಡೊಳೊ ಮತ್ತೆ ತಂಡದ ನಾಯಕಿಯಾಗಿದೊ.
- 2016–17ರ್‌ಲಿ ಪಾಂಡಿಚೇರಿಲಿ ನಡ್ದ 67ನೇ ಭಾರತೀಯ ರೈಲ್ವೆನ ನ್ಯಾಷನಲ್ ಸಿನಿಯರ್ ಚಾಂಪಿಯನ್‌ಸಿಪ್‌ಲಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕನ ಪಡ್ಕೊಂಡೊಳೊ.
- 2015–16ರ್‌ಲಿ ಮೈಸೂರುಲಿ ನಡ್ದ 66ನೇ ಭಾರತೀಯ ರೈಲ್ವೆನ ನ್ಯಾಷನಲ್ ಸಿನಿಯರ್ ಚಾಂಪಿಯನ್‌ಸಿಪ್‌ಲಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕನ ಪಡ್ದ್ ಮೊಸ್ಟ್ ವ್ಯಾಲ್ಯೂಬಲ್ ಪ್ಲೇಯರ್ ಆಫ್ ದಿ ಟೂರ್ನಿಮೆಂಟ್ ಅಂತ ಹೆಸರ್ ತಕೊಂಡೊಳೊ.
- 2015–16ರ್‌ಲಿ ಕೇರಳಲಿ ನಡ್ದ ನ್ಯಾಷನಲ್ ಗೇಮ್ಸ್‌ಲಿ ಪ್ರತಿನಿಧಿಸಿ ಮೂರ್ನೆ ಬಹುಮಾನ ಮತ್ತೆ ಕಂಚಿನ ಪದಕ ತಕೊಂಡೊಳೊ.
- 2015–16ರ್‌ಲಿ ಆಂಧ್ರಪ್ರದೇಶದ ಅನಂತಪುರಲಿ ನಡ್ದ ಸೌತ್ ಜೋನ್ ನ್ಯಾಷನಲ್ಸ್‌ಲಿ ಭಾಗವಹಿಸಿ ಮೊದಲ್ನೆ ಬಹುಮಾನ ಮತ್ತೆ ಚಿನ್ನದ ಪದಕ

ಪಡ್ದ್, ಬೆಸ್ಟ್ ಪ್ಲೇಯರ್ ಆಫ್ ದಿ ಟೀಮ್ ಅಂತ ಹೆಸರ್ ತಕಂಡೊಳೊ.

**ಅಂತರ್ ರೈಲ್ವೆ ವಿಭಾಗದ ಸಾಧನೆಗ:**

- 2019–20ರ್‌ಲಿ ಗೌಹಾಟಿಲಿ ನಡ್ದ 43ನೇ ಆಲ್ ಇಂಡಿಯಾ ಇಂಟರ್ ರೈಲ್ವೆಲಿ ಬಾಗವಹಿಸಿ ಮೂರ್ನೆ ಸ್ಥಾನ ಮತ್ತೆ ಕಂಚಿನ ಬಹುಮಾನ ಪಡ್ದೊಳೊ.
- 2018–19ರ್‌ಲಿ ಸಿಕಾಂದರ್‌ಬಾದ್‌ಲಿ ನಡ್ದ 42ನೇ ಆಲ್ ಇಂಡಿಯಾ ಇಂಟರ್ ರೈಲ್ವೆಲಿ ಬಾಗವಹಿಸಿ ಮೊದಲ್ನೆ ಸ್ಥಾನ ಮತ್ತೆ ಚಿನ್ನದ ಬಹುಮಾನ ಪಡ್ದ್ ಪ್ಲೇಯರ್ ಆಫ್ ದಿ ಮ್ಯಾಚ್ ಅಂತ ಹೆಸರ್ ತೆಕೊಂಡೊಳೊ.
- 2017–18ರ್‌ಲಿ ಕಲ್ಕತ್ತಲಿ ನಡ್ದ 41ನೇ ಆಲ್ ಇಂಡಿಯಾ ಇಂಟರ್ ರೈಲ್ವೆಲಿ ಬಾಗವಹಿಸ್ಯೊಳೊ.
- 2016–17ರ್‌ಲಿ ಸಿಕಂದರ್‌ಬಾದ್‌ಲಿ ನಡ್ದ 40ನೇ ಆಲ್ ಇಂಡಿಯಾ ಇಂಟರ್ ರೈಲ್ವೆಲಿ ಬಾಗವಹಿಸ್ಯೊಳೊ.
- 2015–16ರ್‌ಲಿ ಮುಂಬೈಲಿ ನಡ್ದ 39ನೇ ಆಲ್ ಇಂಡಿಯಾ ಇಂಟರ್ ರೈಲ್ವೆಲಿ ಭಾಗವಹಿ ಎರಡನೇ ಸ್ಥಾನ ಮತ್ತೆ ಬೆಳ್ಳಿ ಬಹುಮಾನ ಪಡ್ದೊಳೊ.

**ರಾಷ್ಟ್ರಮಟ್ಟದ ಸಾಧನೆಗ:**

- 2008–09ರ್‌ಲಿ ಪಂಜಾಬ್‌ಲಿ ನಡ್ದ ರಾಷ್ಟ್ರೀಯ ಸ್ಪರ್ಧೆಲಿ ಭಾಗವಹಿಸ್ಯೊಳೊ.
- 2009–10ರ್‌ಲಿ ಭುವನೇಶ್ವರಲಿ ನಡ್ದ ಮಹಿಳಾ ರಾಷ್ಟ್ರೀಯ ಸ್ಪರ್ಧೆಲಿ ಭಾಗವಹಿಸ್ಯೊಳೊ.
- 2009–10ರ್‌ಲಿ ಮುಂಬೈಲಿ ನೆಡ್ದ ಯುತ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2010–11ರ್‌ಲಿ ತಿರುಚನಪಳ್ಳಿ ನಡ್ದ ಯುತ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2010–11ರ್‌ಲಿ ಇಂಡೋರ್‌ಲಿ ನಡ್ದ ಜೂನಿಯಾರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2010–11ರ್‌ಲಿ ಇಂಡೋರ್‌ನಲಿ ನಡ್ದ ಜೂನಿಯರ್ ಇಂಡಿಯಾನ್ ನ್ಯಾಷನಲ್ಸ್ ಕ್ಯಾಂಪ್‌ಲಿ ಭಾಗವಹಿಸ್ಯೊಳೊ.
- 2010–11ರ್‌ಲಿ ಮುಂಬೈಲಿ ನಡ್ದ ಜೂನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2010–11ರ್‌ಲಿ ದೆಹಲಿಲಿ ನಡ್ದ ಸೀನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2011–12ರ್‌ಲಿ ವಿಶಾಖಪಟ್ಟಣಂಲಿ ನಡ್ದ ಸೌತ್ ಜೋನ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.

- 2011–12ರ್‌ಲಿ ದೆಹಲಿಲಿ ನಡ್ದ ಸೀನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2011–12ರ್‌ಲಿ ಕಣ್ಣೂರುಲಿ ನಡ್ದ ಸ್ಫರ್ಧೆಲಿ ಮೈಸೂರು ವಿಶ್ವವಿದ್ಯಾಲಯನ ಪ್ರತಿನಿಧಿಸ್ಯೊಳೊ.
- 2011–12ರ್‌ಲಿ ದೆಹಲಿ ನಡ್ದ ಎನ್‌ಬಿಎ ಆಲ್ ಇಂಡಿಯ ಸ್ಫರ್ಧೆಲಿ ಭಾಗವಹಿಸ್ಯೊಳೊ.
- 2011–12ರ್‌ಲಿ ಕಲ್ಕತ್ತಲಿ ನಡ್ದ ಯುತ್ ಇಂಡಿಯಾನ್ ಕ್ಯಾಂಪ್‌ಲಿ ಭಾಗವಹಿಸ್ಯೊಳೊ.
- 2011–12ರ್‌ಲಿ ತಮಿಳುನಾಡ್‌ಲಿ ನಡ್ದ ಯುತ್ ಇಂಡಿಯಾನ್ ಕ್ಯಾಂಪ್‌ಲಿ ಭಾಗವಹಿಸ್ಯೊಳೊ.
- 2012–13ರ್‌ಲಿ ದೆಹಲಿಲಿ ನಡ್ದ ಜೂನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸಿದೊ.
- 2012–13ರ್‌ಲಿ ತಮಿಳುನಾಡ್‌ಲಿ ನಡ್ದ ಸ್ಫರ್ಧೆಲಿ ಮೈಸೂರು ವಿಶ್ವವಿದ್ಯಾಲಯನ ಪ್ರತಿನಿಧಿಸ್ಯೊಳೊ.
- 2012–13ರ್‌ಲಿ ಲೂಧಿಯಾನಲಿ ನಡ್ದ ಸೀನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2012–13ರ್‌ಲಿ ದೆಹಲಿಲಿ ನಡ್ದ ಜೂನಿಯರ್ ಇಂಡಿಯಾನ್ ಕ್ಯಾಂಪ್‌ಲಿ ಭಾಗವಹಿಸಿದೊ.
- 2012–13ರ್‌ಲಿ ಬೆಂಗಳೂರುಲಿ ನಡ್ದ ಫೇಡರೇಶನ್ ಕಫ್‌ಲಿ ಭಾಗವಹಿಸ್ಯೊಳೊ.
- 2013–14ರ್‌ಲಿ ದೆಹಲಿಲಿ ನಡ್ದ ಸೀನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2013–14ರ್‌ಲಿ ಗುಜರಾತ್‌ಲಿ ನಡ್ದ ಫೇಡರೇಶನ್ ಕಫ್‌ಲಿ ಭಾಗವಹಿಸ್ಯೊಳೊ.
- 2013–14ರ್‌ಲಿ ಅರುಣಾಫಬಾದ್‌ಲಿ ನಡ್ದ ಸ್ಕಿಲ್ ಡೆವಲಫ್ಮೆಂಟ್ ಕ್ಯಾಂಫ್‌ಲಿ ಭಾಗವಹಿಸ್ಯೊಳೊ.
- 2013–14ರ್‌ಲಿ ಆಂಧ್ರಪ್ರದೇಶಲಿ ನಡ್ದ ಸ್ಫರ್ಧೆಲಿ ಮೈಸೂರು ವಿಶ್ವವಿದ್ಯಾಲಯನ ಪ್ರತಿನಿಧಿಸ್ಯೊಳೊ.
- 2014–15ರ್‌ಲಿ ರಾಜಸ್ಥಾನದ ಬಿಲ್‌ವಾಲ್‌ಲಿ ನಡ್ದ ಸೀನಿಯರ್ ನ್ಯಾಷನಲ್ಸ್‌ಲಿ ಭಾಗವಹಿಸ್ಯೊಳೊ.
- 2015–16ರ್‌ಲಿ ಬೆಂಗಳೂರುಲಿ ನಡ್ದ ಸೀನಿಯರ್ ಇಂಡಿಯಾನ್ ಕ್ಯಾಂಫ್‌ಲಿ ಭಾಗವಹಿಸ್ಯೊಳೊ.
- 2018–19ರ್‌ಲಿ ಚಿತ್ತೂರುಲಿ ನಡ್ದ ಫೇಡರೇಶನ್ ಕಫ್‌ಲಿ ಭಾಗವಹಿಸ್ಯೊಳೊ.

---

**ಓಂಶ್ರೀ ದಯಾನಂದ**
ಕೂಡಕಂಡಿ ಮನೆ, ಭಾಗಮಂಡಲ
ಮೊಬೈಲ್ ಸಂಖ್ಯೆ:6363376487




# ಹೋದಲ್ಲೆಲ್ಲ 'ಸಾಹೇಬ್ರು..' ಜಯಭೇರಿ

**ಶಿವಮೊಗ್ಗಂದ ಬೆಂಗ್ಳೂರ್ ಮುಟ್ಟ**
**'ಸಾಹೇಬ್ರು ಬಂದವೇ'**
**ಅರೆಭಾಷೆ ನಾಟಕ ಯಶಸ್ವೀ ಪ್ರದರ್ಶನ**

●

**ಕುಕ್ಕೇಟಿ ಜಯಪ್ರಕಾಶ್**

ಹಿಂಗೇನೂ ಮಾಡಿಕೆ ಆದೇಂತ ನಾವ್ಗೆ ಗೊತ್ತಾದ್ ಈ ರಂಗಪಯಣ ಮುಗ್ದ ಮೇಲೆನೆ. ಅರೆಭಾಷೆನ ಇತಿಹಾಸಲಿ ಇದೊಂದು ದೊಡ್ಡ ದಾಖಲೆ. ಇಷ್ಟರವರೆಗೆ ಅರೆಭಾಷೆಲಿ ಯಾರೂ ಮಾಡದ ಸಾಧನೆನ ಈ ಸರ್ತಿನ ಅರೆಭಾಷೆ ಅಕಾಡೆಮಿ ಸಾಧಿಸಿಬುಟ್ಟತ್. ಇದ್ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿಯ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ ಇವರ ಛಲ ಮತ್ತು ದೂರದೃಷ್ಟಿನ ಫಲ ಮತ್ತು ಕರ್ನಾಟಕ ಕಂಡ ನಮ್ಮ ಪ್ರೀತಿನ ರಂಗ ನಿರ್ದೇಶಕ ಜೀವನರಾಂ ಸುಳ್ಯ ಇವರ ಕಲಾನೈಪುಣ್ಯ ಮತ್ತು ಪರಿಶ್ರಮದ ಫಲ. ಹೂವುನೊಟ್ಟಿಗೆ ನಾರುಂತೇಳುವಂಗೆ ನಾನೂ ಸೇರಿಕೊಂಡೊಳೆ.

ಹೌದು.. ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಇವು ಕಳ್ದ ವರ್ಷ ಫೆಬ್ರವರಿಲಿ ಅರೆಭಾಷೆ ಒಂದು ನಾಟಕ ತಯಾರ್ ಮಾಡೊಮೋಂತ ನಿರ್ಧಾರ ಮಾಡ್ದೊ. ಜೀವನ ರಾಂ ಇವರೊಟ್ಟಿಗೆ ಮಾತಾಡಿ 30 ದಿನಗಳ ಅರೆಭಾಷೆ ರಂಗ ತರಬೇತಿಗೆ ಆಸಕ್ತಿ ಇರುವವರ ಆಹ್ವಾನ ಮಾಡ್ದೊ ಆದರೆ ಅರೆಭಾಷೆ ಗೊತ್ತಿದ್ದೊವು ಬಾರಿ ಕಮ್ಮಿ ಸಿಕ್ಕಿದೊ. ಆಗ ಬೇರೆ ಜಿಲ್ಲೆಗಳ್ಂದ ಕೆಲವು ಆಸಕ್ತರ್ ಸಿಕ್ಕಿದೊ. ಅವರೆಲ್ಲರ ಸೇರ್ಸಿ ಜೀವನರಾಂ ಅವರ ನಿರ್ದೇಶನಲಿ ರಂಗ ತರಬೇತಿ ಸುರು ಮಾಡ್ದೊ. ತರಬೇತಿಲಿ ಶಿವಮೊಗ್ಗದ 'ನಿನಾಸಂ'ನ ಕೆ.ವಿ ಸುಬ್ಬಣ್ಣ ಮತ್ತು ಕೆ.ವಿ ಅಕ್ಷರ ಇವು ಇಂಗ್ಲೀಷ್ಂದ ತರ್ಜುಮೆ ಮಾಡ್ದ ರಶ್ಯನ್ ನಾಟಕ 'ಸಾಹೇಬರು ಬರುತ್ತಾರೆ' ನಾಟಕನ ಆಡ್ತುವ ತೀರ್ಮಾನಕ್ಕೆ ಬಂದ್ ಅದರ ಅರೆಭಾಷೆಗೆ ತರ್ಜುಮೆ ಮಾಡಿಕೆ ನನ್ನೊಟ್ಟಿಗೆ ಹೇಳ್ದೊ. ಇದ್ ನಂಗೆ ಸಿಕ್ಕಿದ ಅಪರೂಪದ ಅವಕಾಸಂತ ಅದರ ತರ್ಜುಮೆ ಮಾಡಿ ಕೊಟ್ಟೆ. ಜೀವನ ರಾಂ ಕೆಲವೊಂದು ಸಣ್ಣಪುಟ್ಟ ಮಾರ್ಪಾಡು ಮಾಡಿಕಂಡ್ ತರಬೇತಿ ಕೊಟ್ಟೊ. ಎಲ್ಲವೂ ಹೊಸಬರೆ

ಇದ್ದದರ್‌ಂದ ಎಲ್ಲವುಕೂ ಸುರುಂದನೇ ಕಲ್ತುವ ಸವಾಲ್ ಇತ್ತ್. ಜೀವನ್ ರಾಂ ಇದೆಲ್ಲದರ ಸ್ವೀಕಾರ ಮಾಡಿ ತರಬೇತಿ ಕೊಟ್ಟ್ ಬಾರಿ ಲ್ಯಾಕ್‌ನ ನಾಟಕ 'ಸಾಹೇಬ್ರು ಬಂದವೇ' ತಯಾರ್ ಮಾಡ್ದೊ.

ಆದರೇನ್.. ಅದೃಷ್ಟ ಕೊರೋನಾ ರೂಪಲಿ ಕೈ ಕೊಟ್ಟತ್. 2020ರ ಮಾರ್ಚ್ 14ಕ್ಕೆ ಶಿಬಿರ ಸಮಾರೋಪ ಮತ್ತು ನಾಟಕ ಪ್ರದರ್ಶನ ಮಾಡ್ದೂಂತ ನಿಗಂಟ್ ಮಾಡಿದ್ದೊ. ಆದರೆ ರಾಜ್ಯಲಿ ಕೊರೋನಾ ಆರ್ಭಟ ಜಾಸ್ತಿ ಆದರ್‌ಂದ ಮಾ.13ಕ್ಕೆ ಸಾರ್ವಜನಿಕ ಸಮಾರಂಭ ನಿಷೇಧ ಆತ್. ಸ್ಟೇಜ್, ಲೈಟ್, ಮೈಕ್ ಎಲ್ಲ ಕಟ್ಟಿರೂ ಪ್ರದರ್ಶನ ಕೊಡಿಕೆ ಆತ್‌ಲೆ. ಆಮೇಲೆ ಹೆಚ್ಚ್ ಕಡಿಮೆ ಒಂದ್ ವರ್ಸ ಲಾಕ್‌ಡೌನ್. ತಾಳ್ಮೆಲಿ ಕಾದೊ.. ಮತ್ತೆ ಕೊರೊನಾ ಸ್ವಲ್ಪ ಕಡಿಮೆ ಆದ ಮೇಲೆ ಪ್ರದರ್ಶನ ಮಾಡಿಕೆ ಅಂದಾಜ್ ಮಾಡ್ದೊ. ಮತ್ತೆ ಸಂಕಟ ಸುರು ಆತ್. ತರಬೇತಿ ಪಡ್‌ಕಂಡ ಅರ್ಧದಷ್ಟ್ ಕಲಾವಿದರ್ ಬಾಕೆ ಆದುಲೇಂತ ಹೇಳ್ದೊ. ಅವರ ವೈಯಕ್ತಿಕ ಸಮಸ್ಯೆಗ.. ಮತ್ತೆ ಕಲಾವಿದರ ಹುಡುಕಾಟ ಅಂತೂ ಇಂತೂ ಮತ್ತೆ ಒಂದಷ್ಟ್ ಹೊಸ್ಬರ್ ಸಿಕ್ಕಿದೊ. ಒಂದು ತಿಂಗ ಮತ್ತೆ ತರಬೇತಿ ಆಗಿ ಅರೆಭಾಷೆ ನಾಟಕ ತಯಾರಾತ್.

2020 ದ.4 ಮತ್ತು ದ.6ರಂದ್ ಎರ್ಡ್ ದಿನ ಸುಳ್ಯದ ರಂಗಮನೆಲಿ ನಾಟಕ ಪ್ರದರ್ಶನ ಮಾಡ್ದೊ. ನಿರೀಕ್ಷೆಂದ ಹೆಚ್ಚ್ ಜನ ಸೇರ್ದೊ ನಾಟಕ ಬಾರಿ ಲ್ಯಾಕ್ ಉಟ್ಟೂಂತ ಎಲ್ಲವೂ ಹೊಗಳ್ದೊ. ಅದೇ ಕುಸಿಲಿ ಲಕ್ಷ್ಮೀನಾರಾಯಣ ಮತ್ತೆ ಜೀವನ್ ರಾಂ ಸುಳ್ಯ ಅವ್ಕೆ ಗೊತ್ತಿದ್ದವುರೆಲ್ಲ ಸಂಪರ್ಕ ಮಾಡ್ದೊ. ಎಲ್ಲ ಕಡೆಂದ ತುಂಬಾ ಪ್ರೋತ್ಸಾಹ ಸಿಕ್ಕಿತ್. ಇದರ ಫಲನೇ 'ಸಾಹೇಬ್ರು ಬಂದವೇ' 'ರಂಗಪಯಣ'

'ರಂಗಪಯಣ' 2021 ಜ.1ಕ್ಕೆ ಶಿವಮೊಗ್ಗ ರಂಗಾಯಣಲಿ ಉದ್ಘಾಟನೆ ಆತ್. ಆಮೇಲೆ ತೀರ್ಥಹಳ್ಳಿ, ಬೈಂದೂರು, ಕುಂದಾಪುರ, ಮೂಡಬಿದಿರೆ, ಪುತ್ತೂರು, ಮಂಗಳೂರು, ಕುಕ್ಕೆ ಸುಬ್ರಹ್ಮಣ್ಯ, ಮೈಸೂರು ನಿರಂತರ ಪ್ರದರ್ಶನ ಕಂಡ್ ಜ.17ರಂದ್ ಬೆಂಗ್ಳೂರ್‌ನ ರವೀಂದ್ರ ಕಲಾಕ್ಷೇತ್ರಲಿ ಮಂತ್ರಿ. ಎಸ್.ಅಂಗಾರರ ಸಮ್ಮುಖಲಿ ಸಮಾರೋಪ ಮತ್ತು ಪ್ರದರ್ಶನ ನಡ್ತ್..ಹೋದಲ್ಲೆಲ್ಲ ಒಳ್ಳೆ ಪ್ರತಿಕ್ರಿಯೆ ಅರೆಭಾಷೆ ಕನ್ನಡದ ಒಂದ್ ಭಾಷಾಪ್ರಭೇದ ಆದ್ದರ್‌ಂದ ಎಲ್ಲವೂ ಭಾಷೆ ಅರ್ಥ ಆದೇಂತ ಹೇಳ್ದೊ. ಹೊಸಭಾಷೆಲಿ ನಾಟಕ ನೋಡಿ ಎಲ್ಲವೂ ಕುಸಿಪಟ್ಟೊ. 'ಜೀವನ್‌ರಾಂ'

ಅವರ ರಂಗತಂತ್ರ, ನಿರ್ದೇಶನ ನಾಟಕನ ಬಾರಿ ಮೇಲೆ ತಕ್ಕಂಡ್ ಹೋತು. ಅದರೊಟ್ಟಿಗೆ ಸುಳ್ಯ ಮತ್ತು ಕೊಡಗ್‌ನ ಆಸುಪಾಸಿಗೆ ಮಾತ್ರ ಸೀಮಿತ ಅಂತ ಹೇಳ್ತಿದ್ದ ಅರೆಭಾಷೆ ಇಡೀ ರಾಜ್ಯದ ತುಂಬ ಕಡೆಗೆ ಪರಿಚಯ ಆತ್.

ರಾಜಕೀಯ, ಭ್ರಷ್ಟಾಚಾರ, ಲಂಚಗುಳಿತನ ಭಟ್ಟಂಗಿತನಗಳ ವಿಡಂಬನೆ ರೂಪಲಿ ಪ್ರದರ್ಶನ ಮಾಡುವ ಈ ನಾಟಕಲಿ ಅಭಿನಯಿಸಿದ ಎಲ್ಲವೂ ಪ್ರಶಂಸೆಗೆ ಪಾತ್ರರಾದೊ. ವಿನೋದ್ ಮೂಡಗದ್ದೆ, ಎ.ಟಿ ಕುಸುಮಾಧರ, ಹಾರೆಂಬಿ ಯತೀನ್ ವೆಂಕಪ್ಪ, ಅಶ್ವಿನ್ ಕೆ.ಎಸ್, ಅಮೃತ್ ಕುಕ್ಕೇಟಿ, ಸುಜಿತ್ ಕಾಯರಕಟ್ಟೆ, ಶ್ರುತಿ ಮೆದು, ಸುಶ್ಮಿತಾ ಪೊಯ್ಯಮಜಲು, ಮಮತಾ ಕಲ್ಮಕಾರು, ನಿತ್ಯಾನಂದ ಮಲೆಯಾಳ, ಬಂಗಾರಕೋಡಿ ಶಿವಗಣೇಶ್, ಭುವನ್ ಕುಂಬಳಚೇರಿ, ದೀಪಕ್ ಮಜಿಕೋಡಿ, ರಾಜ್ ಮುಖೇಶ್ ಸುಳ್ಯ, ವಿಲಾಸ್ ರಾವ್ ತಾನಾಜಿ, ಬಂಗಾರಕೋಡಿ ಚೇತಸ್, ಬಂಗಾರಕೋಡಿ ಯೋಗಿತಾ ತುಂಬ ಲವಲವಿಕೆಗೆ ಅಭಿನಯ ಮಾಡಿ ಮೆಚ್ಚುಗೆ ಪಡ್ದೊ. ಎಲ್ಲವೂ ಸೇರಿ ಅರೆಭಾಷೆನ ಬಾರಿ ಪೊರ್ಲುಲಿ ಗಡಿದಾಟುವ ಪ್ರಯತ್ನಲಿ ಯಶಸ್ವಿ ಆದೊ. ಈಗ ತುಂಬ ಕಡೆಂದ ನಮ್ಮಲ್ಲಿ ಬನ್ನಿ. ನಮ್ಮಲ್ಲಿ ಪ್ರದರ್ಶನ ಕೊಡೀಂತ ಕೇಳ್ತಾ ಒಳೊ. ಆದರೆ ಸಮಯದ ಒತ್ತಡ ಉಟ್ಟು. ಹೋಕೆ ಅದೇನೋ ಇಲ್ಲೆನೊ ಗೊತ್ತಿಲ್ಲೆ.

ಒಂದಷ್ಟ್ ಟೀಕೆನೂ ಬಾತ್. ಇದ್ ಆಕೆ ಉಟ್ಟಾ ಹೋಕೆ ಉಟ್ಟಾಂತ ಹಿಂದೆಂದ ಮಾತೂ ಬಂದಿತ್ತ್. ಆದರೆ ಈ ಎಲ್ಲಾ ಟೀಕೆಗಳ ಮೀರ್ರಿ ನಾಟಕ ಗೆದ್ದತ್. ಒಟ್ಟಿಗೆ ಅರೆಭಾಷೆನೂ, ಅರೆಭಾಷೆ ಅಕಾಡೆಮಿನೂ ಗೆಲುವು ಕಂಡತ್. ಇದೇ ಹುಮ್ಮಸ್ಸ್‌ಲಿ ಮುಂದೇನ ವರ್ಷನೂ ಇನ್ನೊಂದು ನಾಟಕ ತಯಾರ್ ಮಾಡಿಕೆ ಅಕಾಡೆಮಿ ಆಲೋಚನೆಲಿ ಉಟ್ಟು. ಅದ್ಕೇ ಎಲ್ಲಾ ಅರೆಭಾಷೆ ಬಾಂಧವರೂ, ಅಭಿಮಾನಿಗಳ ಕೈ ಜೋಡ್ಸೊಕೂಂತ ಕೇಳಿಕಂಡವೆ.

---

**ಕುಕ್ಕೇಟಿ ಜಯಪ್ರಕಾಶ್**
ಸುಳ್ಯ




# ಅಂಗಾರನ ಕಲ್ಲ್

**ಎಂ.ಜಿ. ಕಾವೇರಮ್ಮ**

'ಅಂಗಾರನ ಕಲ್ಲ್' – ಇದರ ಹೆಸ್ರ್ ಕೇಳಿಯರಿನಾ? ಎಂತಪ್ಪಾ ಇದ್ ಅಂಗಾರನ ಕಲ್ಲ್ ಎಂತ ಮೂಂಕು ಮುರ್ಯರ್ಬೊಡಿ. ಅದ್ಕೂ ಒಂದ್ ಕತೆ ಉಟ್ಟು. ನಾ ಈಗ ಹೇಳಿನೆ. ಕೇಳಿನಿ.

ನಾವು ಸಣ್ಣದಿರಿಕನ ಮನೆ ತುಂಬಾ ಜನಂಗ. ಹಟ್ಟಿ ತುಂಬಾ ದನಂಗ. ಮನೆ ಕೆಲ್ಸ, ದನಂಗಳ ಚಾಕ್ರಿ ಮಾಡ್ದರ್ಲಿ ನಾವುಗೆ ದಿನ ಹೋದೇ ಗೊತ್ತಾಗ್ತಿತ್ಲೆ. ನಮ್ಮ ಹಟ್ಟಿಲಿ ಹತ್ತ್ ಹನ್ನೆರ್ಡ್ ನಡೆ ದನಂಗ. ಅದರ್ಲಿ ನಾಕೈದ್ ದಿನಾ ಕರ್‌ಬುಡುವ ಹಸ್‌ಗ. ಅವುಗಳ ಕರ್‌ಗಳ ಕಟ್ಟಿಕೆನೇ ಒಂದ್ ಸಣ್ಣ ಕಂಚಿಳ್‌ನ ನೀರೆಡಿ ಕೊಟಗೆನ ಮಾಡ್ ಇಳ್ಸಿ ಅವ್ವ ಕಟ್ಟಿಸಿದ್ದೊ. ಅದರ್ಲಿ ನಾಕೈದ್ ಕರ್‌ಗಳ ದಾರಾಳ ಕಟ್ಟಿ ಹಾಕಿಕೆ ಜಾಗೆ ಇರ್ತಿತ್ತ್ . ಕರ್ ಬುಟ್ಟ ಮೇಲೆ ಆ ಕರ್‌ಗಳ ಹಾರಾಟ ತಡ್ಯಕೆ ಆಗ್ತಿತ್ಲೆ.

ಅವ್ವ ಹಸ್‌ಗಳ ಹಾಲ್ ಕರ್ಯರ್ಕಾಕನ ಮೂರ್ ಮೊಲೆನ ಹಾಲ್‌ನ ಮಾತ್ರ ಕರ್ಯರ್ತಿದ್ದೊ. ಒಂದ್ ಮೊಲೆನ ಹಾಲ್‌ನ ಕರ್‌ಗಳ್‌ಗಾಗಿ ಬುಡ್ತಿದ್ದೊ.. ಹಾಂಗಾಗಿ ಕರ್‌ಗ ಹೊಟ್ಟೆ ತುಂಬಾ ಹಾಲ್ ಕುಡ್ದ್ ಚುಳ್ಳಿಕಂಡ್ ಇಜ್ಜೆಲ್ ತುಂಬಾ ಹಾರಾಡ್ತಿದ್ದೊ. ಅವುಗಳ ಹಿಡ್ದ್ ಕಂಚ್‌ಳ್‌ಲಿ ಕಟ್ಟಿ ಹಾಕುವ ಕೆಲ್ಸನ ಅವ್ವ ನಂಗೆ ಒಪ್ಪುಸಿದ್ದೊ. ಅದ್ ಸಣ್ಣ ಪಿರಾಯದ ನಂಗೆ ಬಾರೀ ಕಸ್ಟದ ಕೆಲ್ಸಸ ಆಗಿತ್ತ್. ಆದರೂ ಹಟ ಬುಡದೆ ಅದರೆಲ್ಲಾ ಹಿಡ್ದ್ ಕಂಚ್‌ಳ್‌ಲಿ ಕಟ್ಟಿದ್ದೆ.

ನಾ ಏನೋ ಹೇಳಿಕೆ ಹೊರ್ಟ್ ಕರ್‌ಗಳ ಪುರಾಣಲಿ ಹೊತ್ತ್ ಕಳ್ದೇಂತ ಬೇಜಾರ್ ಮಾಡ್ವೊಡಿ. ಹರಿಕತೆಲಿ ಒಂದ್ ಉಪಕತೆ ಇದ್ದರೇನೇ ಆ ಕತೆಗೆ ರಸ ಹೆಚ್ಚ್ ಅಲ್ಲನೋ?

ನಮ್ಮ ಅವ್ವ ಹಸ್‌ಗಳ ಕರ್ ಬುಟ್ಟ್ ಚೊಂಬು ತುಂಬಾ ಹಾಲ್‌ನ ಒಳಗೆ ತಕೊಂಡೋಕೆ ಮುಂದೆ ಅದರ ಬಾಯಿ ಮುಟ್ಟ ಬಂದ ನೊರೆ ಹಾಲ್‌ಲಿ (ಹಟ್ಟಿನ ಹಿಂದೆನ ದರೆಲಿ ಬೆಳ್ದ ಸರ್ಳಿ ಸೊಪ್ಪುನ ದೈಯಿಂದ ಒಂದ್ ಕಣೆನ ಮುರ್ದ್‌ದ್ ಕರ್ ಬುಡಿಕೆ ಮುಂದೆನೆ ಹಟ್ಟಿನ ಮಾಡ್‌ಲಿ ಸಿಕ್ಕಿಸಿ ಇಸ್ತಿದ್ದೊ.) ಒಂದ್ ಸರ್ಳಿಸೊಪ್ಪುನ ಕೊಡಿನ ಮುಣ್‌ಂಗಿಸಿ ತೆಗ್ದ್ ಹಟ್ಟಿನ ಗೋಡೆಲಿ ಇಸಿದ್ದ ಅಂಗಾರನ ಕಲ್ಲ್ ಮೇಲೆ ಇಸ್ತಿದ್ದೊ ಆಮೇಲೆ ಆ ಹಾಲ್‌ನ ಚೊಂಬುನ ಒಳಗೆ ತಕೊಂಡೋಗಿ ನೆಲುಲಿ. ಇಸ್ತಿದ್ದೊ.

ಹಟ್ಟಿ ಕಟ್ಟಿಕಾಕನನೇ ಒಂದ್ ಅಡಿ ಉದ್ದ, ಮುಕ್ಕಾಲ್ ಅಡಿ ಅಗಲ, ಒಂದ್ ಅಂಗುಲ ದಪ್ಪದ ಪಾರೆ ಕಲ್ಲ್‌ನ, ಹಟ್ಟಿನ ಗೋಡೆ ಮೇಲೆ ಇಸ್ತಿದ್ದೊ. ಅದರ ದಿನಾ ಕರ್ ಬುಡಿಕೆ ಬಾಕಾಕನ ತೊಳ್ಯತಿದ್ದೊ ಎರ್ಡ್ ಕೈಲಿ ಎರ್ಡ್ ಚೊಂಬು ತುಂಬಾ ನೀರ್ ತುಂಬುಸಿ ಅವ್ವ ಕರ್ ಬುಡಿಕೆ ಬಾಕಾಕನ ತಾತಿದ್ದೊ. ಒಂದ್ ಚೊಂಬು ನೀರ್ ಅಂಗಾರನ ಕಲ್ಲ್‌ನ ತೊಳ್ಯಕೆ, ಇನ್ನೊಂದ್ ಚೊಂಬು ನೀರ್ ಹಸ್‌ಗಳ ಮೊಲೆ ತೊಳ್ಯಕೇಂತ ತಾತಿದ್ದೊ. ಅಂಗಾರನ ಕಲ್ಲ್‌ಗೆ ಯಾಗೋಳೂ ಅವ್ವ ಕರ್ ಬುಟ್ಟ್‌ದ್ ಬಾಕಾಕನ ಸೊಪ್ಪುನ ಕೊಡಿಲಿ ನೊರೆ ಹಾಲ್‌ನ ತೆಗ್ದ್ ಇಸಿ ಕೈ ಮುಗ್ಯೋದರ ನೋಡಿ ನಾ ಅವ್ವನ ಕೇಳ್ತಿದ್ದೆ, “ಅವ್ವಾ, ಅದ್ ಏಕೆ ಆ ಕಲ್ಲ್‌ನ ಮೇಲೆ ಸೊಪ್ಪುನ ಕೊಡಿಲಿ ನೊರೆಹಾಲ್‌ನ ತೆಗ್ದ್ ಇಸಿ, ಕೈ ಮುಗ್ದರೆ?” – ಎಂತ.

ಆಗ ಅವ್ವ ಹೇಳ್ತಿದ್ದೊ, “ಅದ್ ಅಂಗಾರನ ಕಲ್ಲ್” – ಎಂತ.

“ಅಂಗಾರ ಅಂದರೆ ಯಾರ್?” – ನಾ ಅವ್ವನ ಕೇಳ್ತಿದ್ದೆ.

“ಅಂಗಾರ ಎಂತ ಹೇಳ್ರೆ ಕೃಷ್ಣ ದೇವ್ರು. ಕೃಷ್ಣ ದೇವ್ರು ಕಪ್ಪು ಅಲ್ಲನೋ? ಅದ್ಕೆ ಅಂವನ ಅಂಗಾರ ಎಂತ ಕರ್ಯರ್ತಿದ್ದೊ. ಅಂಗಾರ ಎಂತ ಮೊಸಿ ತುಂಡುಗೆ ಹೇಳಿವೆ. ಮೊಸಿ ತುಂಡು ಕಪ್ಪು ಅಲ್ಲನೋ?” – ಎಂತ ಅವ್ವ ವಿವರ್ಣೆ ಕೊಡ್ತಿದ್ದೊ.

ಓದು–ಬರ ಕಲ್ಯದ ಅವ್ವನ ತಿಳ್ವಳ್ಕೆಗೆ ನಾ ಬೆರ್ಗಾಗ್ತಿದ್ದೆ. ಹಿಂದೆನ ಕಾಲದೊವು ಓದು, ಬರ ಕಲ್ಯದಿದ್ದರೂ ಅವು ಅವರ ಜೀವನದ ಅನ್ಬವಗಳ ತಿಳ್ಕಂಡ. ಜ್ಞಾನಬಂಡಾರನೇ ಆಗಿ ಇರ್ತಿದ್ದೊ.

ನಮ್ಮ ಕಾಲಲಿ. ದನ ಕರ್ ಹಾಕಿರೆ ಹದ್ನಾರ್ ದಿನ ಮುಟ್ಟ ಅದರ ಹಾಲ್‌ನ ಮನೆವು ಉಪ್ಯೋಗಿಸ್ತಿತ್ಲೆ. ದಿನಾ ಎರ್ಡ್ ಮೊಲೆ ಹಾಲ್‌ನ ಕರ್ದ್ ಆ ಹಾಲ್‌ನ ಮೊಡ್ಡಿ ಮಡ್ಕೆಗೆ ಹೊಯ್ದ್ ದನಂಗಳಿಗೆ ತಿನ್ಸ್ ತಿದ್ದೊ. ಹದ್ನಾರ್ ಕಳ್ದ ಮೇಲೆ ಸುರುನ ಒಂದ್ ಚೊಂಬು ಹಾಲ್‌ನ ದೇವುಸ್ತಾನಕ್ಕೆ ಕೊಡ್ತಿದ್ದೊ. ಆಮೇಲೆ ಮನೆವು ಉಪ್ಯೋಗಿಸ್ತಿದ್ದೊ. ಹತ್ತ್ ದಿನ ಕಳ್ದ ಮೇಲೆ ದಿನಾ ಎರ್ಡ್ ಮೊಲೆ ಹಾಲ್‌ನ ಕರ್ದ್ ಅದರ ಕಾಸಿ, ತಣ್ಸಿ ಅದ್ಕೆ ಹೆಪ್ಪು ಹಾಕಿ ಇಸ್ತಿದ್ದೊ. ದಿನಾ ಅದ್ಕೆ ಆಯಾಯ ದಿನದ ಹಾಲ್‌ನ ಕಾಸಿ, ತಣ್ಸಿ ಸೇರ್ಸ್ತಿದ್ದೊ. ಹದ್ನಾರ್ನೇ ದಿನ ಅದರ್‌ಂದಾದ ಮೊಸ್ರ್‌ನ ಮೊಸ್ರನ್ನ ಮಾಡಿ, ಒಂದು ಕೊಡಿ ಬಾಳೆಲೆಲಿ ಒಂದು ಮುದ್ದೆ ಮೊಸ್ರನ್ನ ಹಾಕಿ, ಅಂಗಾರನ ಕಲ್ಲ್‌ನ ಮೇಲೆ ಇಸಿ ಕೈ ಮುಗ್ದ್ ದನಂಗಳಿಗೆ ಒಳ್ಳೆದ್ ಮಾಡ್‌ಂತ ಕೇಳಿಕಂಬತಿದ್ದೊ. ಒಳ್ದದರ ಮನೆವೆಲ್ಲಾ ಉಂಬತಿದ್ದೊ.

ಈಗ ಗೊತ್ತಾತಲೇ? ಅಂಗಾರನ ಕಲ್ಲ್ ಎಂತ ಹೇಳ್ರೆ ಎಂತದ್‌ಂತ?

ನಾ ನನ್ನ ಅನ್ಬವನ ಹೇಳ್ಯೆಳೆ. ನಿಮ್ಮ ಅನ್ಬವ ಬೇರೆ ಇರ್ದುì. ಅದರ ನೀವು ಹಂಚಿಕಣಿ.

ಈಗೆಲ್ಲಿ ಉಟ್ಟು ಹಿಂದೆನ ಕಾಲದ ಸೊಗ್ಸ್?

ಈಗನ ಜನಂಗಳಿಗೆ ಅದೆಲ್ಲಾ ಒಂದ್ ಕನ್ಸ್.

ಈಗನ ಜನಂಗಳ ಯಂತ್ರದ ಜೀವನಲಿ ಸಾರನೇಯಿಲ್ಲೆ. ಬರೇ ಹಿಂಟೆ ಮಾತ್ರ.

---

**ಎಂ.ಜಿ. ಕಾವೇರಮ್ಮ**
‘ನಿಸರ್ಗ’
ಮಾವಜಿ, ಸುಳ್ಯ, ದ.ಕ.



ಅನುಭವ



# ಕೊರೊನಾಕ್ಕೊಂದು ನಮಸ್ಕಾರ!!!



**ಪಿ.ಜಿ. ಅಂಬೆಕಲ್**

ಬೆಂಗಳೂರ್ನ ವಿದ್ಯಾರಣ್ಯಪುರ ಗೊತ್ತಿಲ್ಲರದ್ರೂ ಬಿ.ಇ.ಎಲ್. ಹೆಚ್ಚಿನವುಕೆ ಗೊತ್ತಿರ್ದು. ಆ ಬಿ.ಇ.ಎಲ್. ಸರ್ಕಲ್‌ಂದ ಮುಂದೆ ಹೋಗಿ ಬಲ್ದ್‌ಗೆ ತಿರ್ಗಿ ಮೂರು ನಾಲ್ಕ್ ಕಿ.ಮೀ. ಹೋದರೆ ನಂಜಪ್ಪ ಸರ್ಕಲ್ ದಾಟಿದಾಂಗೆ ಸಿಕ್ಕುದೇ ವಿದ್ಯಾರಣ್ಯಪುರ. ಅದರ ಬಿ.ಇ.ಎಲ್. ಬಡಾವಣೆನ ಒಂದನೇ ಮುಕ್ಯರಸ್ತೆಲಿಯೇ ರಾಯಲ್ ಅಪಾರ್ಟಮೆಂಟ್ ಉಟ್ಟು. ಅದರ್ಲಿ ಐದನೇ ಮಹಡಿನ 535ನೇ ಮನೆನೇ ವಿಕ್ಕಿ ಕಾರ್ಯಪ್ಪ ಮತ್ತೆ ಪೂವಿ ಪಾರ್ವತಿನವರ ಮನೆ. ಮನೇಂತ ಹೇಳ್ರೆ ಎರ್ಡ್ ಬೆಡ್‌ರೂಮ್ನ ಪ್ಲಾಟ್. ಈ ವಿಕ್ಕಿ ಪೂವಿನ ಕೊಂಡಾಟದ ಮಗಳೇ ಭೂಮಿಕಾ. ಅದ್ ಈಗ ಶ್ರೀ ಚೈತನ್ಯ ಸಾಲೆಲಿ ಕೇಜಿಗಳೆಲ್ಲಾ ತೂಗಿ ಮೂರ್ನೇ ಕ್ಲಾಸಿಗೆ ಎತ್ತಿಟು.

ವಿಕ್ಕಿ ಟಿ.ಸಿ.ಎಸ್. ಕಂಪೆನಿಲಿ ಸಾಪ್ಟ್ ವೇರ್ ಇಂಜಿನಿಯರ್. ಸಂಬಳ ಎಂ.ಎನ್.ಸಿ. ಕಂಪೆನೀಂತ ಆದ ಮೇಲೆ ಕೇಳ್ದೇ ಬೇಡ, ಒಂದುವರೆ ಲಕ್ಸಂದ ಮೇಲೆನೇ. ಅಸ್ಟ್ ಸಂಬಳ ಕೊಟ್ಟ ಮೇಲೆ ಹಂಗೇ ದುಡ್ಸಿಕಣೊಕು ತಾನೆ. ಪುಕುಳಿ ತೊರ್ಸಿಕಣಿಕೆ ಪುರುಸೊತ್ತ್ ಇಲ್ಲೆ. ಬೊಳ್ಪುಗೆ ಆರುವರೆ ಗಂಟೆಗೆ ಮನೆ ಬುಡೊಕು. ಅವನ ಕಂಪೆನಿ ಇರ್ದು ಇಲೆಕ್ಟ್ರಾನಿಕ್ ಸಿಟಿಲಿ. ಹಿಂಬೊತು ಮನೆಗೆ ಬಂದ್ ಎತ್ತ್ ಕನ ಇರ್ಲ್ ಒಂಬತ್ತ್ ಗಂಟೆ! ಬಂದ ಮೇಲೆನೂ ಏನಾರ್ ಪುರುಸೊತ್ತು ಉಟ್ಟಾ ಲ್ಯಾಪ್ ಟಾಪ್ ಹಿಡ್ಕಂಡ್ ಏನೋ ಆಪೀಸ್ ಕೆಲ್ಸನೇ ಮಾಡಿಕಂಡ್ ಮಲ್ಗ್ ಕನ ಹನ್ನೊಂದು ಹನ್ನೆರ್ಡ್ ಗಂಟೆ. ಇನ್ನ್ ಸನಿವಾರ, ಐತಾರ ವಾರಕ್ಕೆ ಎರ್ಡ್ ದಿನ ರಜೆಯೇನೋ ಉಟ್ಟು. ಅಂದೂ ಅಂವ ಮನೆಲಿ ಇರ್ದುತಾ ಇಲ್ಲೆ. ಮೊದುವೆ, ಎಂಗೇಜ್ ಮೆಂಟ್, ಪೂಜೆ, ಇಲ್ಲರೆ ಜೋಸ್ತಿಗಳೊಟ್ಟಿಗೆ ವೀಕೆಂಡ್ ಪಾರ್ಟಿಂತ ಹಾರಿ ಬುಟ್ಟದೆ. ಬಾರ್ದೋ ನೆಡಿರ್ಲ್ ಎಸ್ಟೆಷ್ಟೋ ಹೊತ್ತಿಗೆ!?

ಬೊಳ್ಪುಗೆ ಆರುವರೆಗೆ ಗಂಡ ಮನೆಂದ ಹೊರ್ಟದೆ, ಎಂಟ್ ಗಂಟೆಗೆ

ಮಗಳ ಸಾಲೆ ವೇನಿಗೆ ರೆಡಿಮಾಡಿ ಕಳ್ಸೊಕು. ಅವಿಬ್ರೊಬ್ರು ಹೋದ ಮೇಲೆ ಮನೆ ಕೆಲ್ಸ ಹಂಜ ಏನೋ ಇದ್ದದೆ, ಅದ್ ಎಸ್ಟ್ ಹೊತ್ತು. ಅದಾದ ಮೇಲೆ ಪೂವಿಗೆ ಏನೂ ಮಾಡಿಕೆ ಇಲ್ಲೆ. ಒಬ್ಬಳೇ ದೆವ್ವದಾಂಗೆ ಇರ್ದು ಬೇಜಾರಾಕೆ ಸುರಾತ್, ಬೋರ್ ಬೋರ್!!! ನಾನೂ ಒಂದು ಏನಾರ್ ಕೆಲ್ಸಕ್ಕೆ ಸೇರಿರೆ ಒಳ್ಳೆದ್‌ಂತ ಗ್ರೇಸಿಕಂಡ್ ಇರ್ಕನ ಆಚೆಮನೆ ಟೀಚರ್ ಪೊನ್ನುಮಣಿ ನಮ್ಮ ಸಾಲೆಲಿ ಟೀಚರ್ಗಳ ತಕಂಡವೆ ನಿವೇಕೆ ಅರ್ಜಿ ಹಾಕಿಕೆ ಆಗದ್‌ಂತ ಕೇಳ್ತ್. ಹೇಂಗೂ ಪೂವಿ ಬಿ.ಎಸ್ಸಿ., ಓದಿದ ಗಿರಾಕಿ. ಒಂದು ಕಲ್ಲ್ ಹೊಡಿಯೊನೊ ಬಿದ್ದರೆ ಹಣ್ಣ್, ಹೋದರೆ ಒಂದು ಕಲ್ಲ್ ತಾನೇಂತ. ಝೀ ಸಾಲೆಗೆ ಅರ್ಜಿ ಗುಜರಾಯಿಸಿಯೇ ಬುಟ್ಟತ್! ಸಂದರ್ಸನಕೂ ಕರ್ದೊ. ಬಿ.ಎಡ್. ಆಗದ್ರೂ ಸೈನ್ಸ್, ಮೇತ್ಸ್ ಎರಡೂ ಪಾಟ ಮಾಡ್ಸಕ್ ಸಂಬಳನೂ ಕಮ್ಮಿ ಕೊಟ್ರೆ ಸಾಕ್‌ಂತ ಗ್ರೇಸಿದ ಸಾಲೆನ ಮೆನೇಜ್ ಮೆಂಟ್ನವು ಕೆಲ್ಸಕೂ ಕರ್ದೊ. ಅಂತೂ ಪೂವಿನ ರೊಟ್ಟಿ ಜಾರಿ ತುಪ್ಪಕೆ ಬೀತ್.

ಪೂವಿ ಕೆಲ್ಸಕ್ಕೆ ಹೊರ್ಟ್ ನಿತ್ತದರ ಕಂಡ್ ವಿಕ್ಕಿನ ಪಿತ್ತ ನೆತ್ತಿಗೆ ಏರ್ತ್. "ನಮ್ಮ ಸಂಸಾರಕ್ಕೆ ನನ್ನ ಸಂಬಳ ಸಾಲದೋ ನೀ ದುಡ್ಡ್ ತರೋಕೋಂತ" ಕೇಳ್ಕನ ಪೂವಿ ಸಮಾದಾನಲಿ ಇಡೀ ದಿನ ಮನೇಲಿ ಒಬ್ಬಳೇ ಇರ್ದು ನಂಗೆ ತುಂಬಾ ಬೇಜಾರಾದೆ ನಾ ಟೀಚರ್ ಆದರೆ ನಮ್ಮ ಮಗಳಿಗೂ ಹೇಳಿಕೊಡಿಕೆ ಸುಲ್ಪ ಆದೆ. ಝೀ ಸ್ಕೂಲ್‌ಂದ ಚೈತನ್ಯ ಸಾಲೆ ಹಂಜನೇ ದೂರಲಿ ಇರ್ದರ್‌ಂದ ನಾನೇ ಕೂಸುನ ಆಕ್ಟಿವಲಿ ಕರ್ಕಂಡ್ ಹೋಕ್. ವೇನಿಗೆ ಕೊಡುವ ಇಪ್ಪತ್ತೈದ್ ಸಾವ್ರ ಒಳ್ಳದೆ. ನಿಮ್ಮ ಸೇವಿಂಗ್ಸ್‌ನೊಟ್ಟಿಗೆ ನಾನೂ ಹಂಞ ಒಳ್ಸಿರೆ ಇನ್ನೊಂದು ನಾಲ್ಕೈದ್ ವರ್ಸಲಾರ್ ಒಂದು ಲಾಯಿಕ್ನ ಮನೆ ಮಾಡಕ್ ಯೋಚನೆ ಮಾಡೀಂತ ಹೇಳ್ತ್. ಮನೆ ಮಾಡೊನೋಂತ ಹೇಳ್ದರ್‌ಂದ ವಿಕ್ಕಿನ ಪಿತ್ತ ಇಳ್ದ್ ಸುಮ್ಮಂಗಾತ್. ಪೂವಿನ ಕೆಲ್ಸಕ್ಕೆ ಕಳ್ಸಿಕೆ ಒಪ್ಪಿತ್.

ಭೂಮಿ ಪುಟ್ಟಿನ ಯೆತೆನೇ ಬೇರೆ. ಮನೆಲಿರೊವು ಮೂರೇ ಜನ, ಪೊಪ್ಪ ನಾ ಎದ್ರಿಕೆ ಮುಂದೇ ಆಪೀಸಿಗೆ ಹೋದವೆ. ಅಮ್ಮನೋ ಅಡ್ಗೆ ಗಿಡ್ಗೇಂತ ಅಡ್ಗೆ ಕೋಣೆಲೇ. ಅದ್ ಮುಗ್ದರೆ ಮಾಮೆಮನೆ ಅವ್ವನೊಟ್ಟಿಗೋ, ಪ್ರೆಂಡ್ಸ್ ಗಳೊಟ್ಟಿಗೋ, ಯಾರ್ಯಾರೊಟ್ಟಗೋ ಮೊಬೈಲಿ ಮಾತಾಡಿಕಂಡೇ, ಅಡಿಗೆ ಮಾಡ್ದೊ ಮೊಬೈಲ್‌ಲೇ! ನನ್ನ ಒಟ್ಟಿಗೆ ಮಾತಾಡಿಕೆ ಪುರುಸೊತ್ತೇ ಇಲ್ಲೆ. ಸಾಲೆಂದ ಬಂದಾಂಗೆ ಏನಾರ್ ಬಿಸ್ಕೇಟ್ಗಳ ಕೊಟ್ಟ್, ಮುಂದೆ ನಿನ್ನ ಹೋಂವರ್ಕ್ಗಳ ಮುಗ್ಸ್‌ಂತ ಹೇಳ್ದೆ. ಅದರ ಮಾಡಿ ಅಮ್ಮನ ಹಕ್ಕಲೆ

ಹೋಗಿ ಒಮ್ಮೆ ಅಮ್ಮನ ಮಂಜಣೆಲಿ ತಬ್ಬಿಕಣಿಕೆ ನೋಡ್ರೆ "ನಿನ್ನದೆಂತನೇ ಬೆರ್‌ಂಗಣೆ ನೀ ಏನ್ ಸಣ್ಣ ಕೂಸೊ? ನಂಗೆ ಪೇಪರ್ ತಿದ್ದಿಕುಟ್ಟು ಹೋಗಿ ಓದಿಕಾಂತ ಜೋರ್ಮಾಡ್ಡೆ. ಯಾಗಾರ್ ತಲೆ ಬೇನೆ ಆಗಿ 'ಅಮ್ಮ ತಲೆ ಸಿಡ್ತ ಆಗ್ತಾ ಉಟ್ಟು ನಾ ಹಂಜ ಮಲ್ಕಣೆಹಿಂತ ಹೇಳ್ರೆ ಸಾಕ್" ಏನ್ನೀ ನಿಂಗೆ ಓದಿಕಾಕನ ತಲೆ ಬೇನೆ ಆದು, ಕ್ಲಾಸ್ಲಿ ನಿನ್ನಂದ ಎಸ್ಟ್ ಮಕ್ಕ ರೇಂಕ್‌ಲಿ ಮುಂದೆ ಒಳೊ ಗೊತ್ತುಟಾಂತ ಬೊಯ್ದದೆ. ಅಮ್ಮ ಯಾಗೊಳು ಯಾಕೆ ನನ್ನೊಟ್ಟಿಗೆ ಸುಡುಸುಡೂಂತ ಇದ್ದದೆ. ತೊಬ್ಬಿ ಮುದ್ದು ಮಾಡ್ದು ಇಲ್ಲೇ ಇಲ್ಲೆ. ಅದರ ಮಕ್ಕಳ ಹೋಂವರ್ಕ್, ಪೇಪರ್ ತಿದ್ದಟ ಬುಟ್ಟರೆ ಮೊಬೈಲ್! ನನ್ನ ಕೇಳೊವೇ ಇಲ್ಲೆ, ಮನೆ ಒಳೆಗೇ ಯಾಗೊಳು ಕುಕ್ಕುರ್ ಬೊಡಿಯೊಕು. ಐತಾರ ಒಂದು ದಿನ ಪ್ಲಾಟ್ನ ಮಕ್ಕಳೊಟ್ಟಿಗೆ ಆಡಿಕೆ ಕಳ್ಸುದೂ ಬಂಜಲಿ. ನಂಗೆ ಯಾಗೊಳು ಜೈಲ್!!!

ಇನ್ನು ಪೊಪ್ಪನ ಕೇಳ್ದೇ ಬೇಡ. ಬೊಳ್ಪುಗೆ ನಾ ಎದ್ರಿಕೆ ಮುಂದೆ ಆಪೀಸಿಗೆ ಹೋಕೆ ಆತ್. ನಾ ಮಲ್ಗಿಕಾಕನ ಬಂದವೆ. ಬಂದಮೇಲೂ ಒಂದು ಪ್ರೀತಿನ ಮಾತ್ ಕತೆ ಇಲ್ಲೆ, ಓದಿದಾ, ಬರ್ದಾ, ಟೆಸ್ಟ್ ಹೇಂಗೆ ಮಾಡಿಯೊಳ,ಈ ಸರ್ತಿ ಎಸ್ಟನೇ ರೇಂಕ್ ಇದೇ ಮಾತ್. ಆ ಮೇಲೆ ಅವರ ಲ್ಯಾಪ್ ಟಾಪ್ ಹಿಡ್ಕಂಡ್ ಏನಾರ್ ಕುಟ್ಟಿಕಂಡ್ ಇದ್ದವೆ. ಅಪ್ಪನೊಟ್ಟಿಗೆ ಆಟ ಆಡೊಕು, ಅವು ನನ್ನ ಕೂಸುಮರಿ ಮಾಡೊಕು, ಉಪ್ಪು ಮೂಟೆ ಹೊರೊಕು, ಪಾರ್ಕ್ಗೆ ಕರ್ಕಂಡ್ ಹೋಕು. ಮಾಲ್ಗಳ್ಲಿ ಸುತ್ತಾಡಸೊಕೂಂತ ಎಸ್ಟೊಂದು ಆಸೆ ನಂಗೆ. ಆದರೆ ಅದ್ ಒಂದೂ ಪೊಪ್ಪ ಮಾಡ್ದುಲೆ. ಅವುಕೆ ಯಾಗೊಳು ಅವರ ಲ್ಯಾಪ್‌ಟಾಪ್, ಅಮ್ಮಂಗೆ ಮೊಬೈಲ್. ನಂಗೆ ಯಾರೂ ಇಲ್ಲೆ. ಒಮ್ಮೊಮ್ಮೆ ನಾ ಪೊಪ್ಪನ ಲ್ಯಾಪ್ ಟಾಪೋ, ಅಮ್ಮನ ಮೊಬೈಲೋ ಆಗಿದ್ದರೆ ಲಾಯಿಕ್ ಇತ್ತ್. ಆಗ ಅವರೊಟ್ಟಿಗೆ ಯಾಗೊಳು ಇರಕಾಗಿತ್ತ್‌ಂತ ಅನ್ಸಿದೆ. ನಾ ಪೊಪ್ಪನ ಲ್ಯಾಪ್ ಟಾಪ್ ಆದರೆ ನನ್ನ ಯಾಗೊಳು ಒಟ್ಟಗೆ ನೇತಾಡ್ಸಿಕಂಡೇ ಇದ್ದವೆ. ಪೊಪ್ಪನೊಟ್ಟಿಗೆ ಇರ್ದು ಎಸ್ಟ್ ಕುಸಿ. ಅಮ್ಮನ ಮೊಬೈಲ್ ನಾ ಆದರೆ ಯಾಗೊಳು ಕುಸಿ ಕುಸೀಂದ ಅಮ್ಮ ಮಾತಾಡಿಕಂಡ್ ಇದ್ದದೆ. ಓ ದೇವ್ರೆ ನನ್ನ ಹಂಗೇ ಮಾಡಪ್ಪಾ ನಿಂಗೆ ನೂರು ನಮಸ್ಕಾರ.

ಭೂಮಿ ಪುಟ್ಟಿ ಹೀಂಗೆ ಎತೆಲಿ ಇರ್ಕನ ಊರುಲಿ ಕೊರೊನಾಂತ ಹೇಳ್ವ ಯಾವುದೋ ರೋಗ ಬಂದ್ ಊರಿಡೀ ಲಾಕ್ ಡೌನ್ ಗಡ! ಎಲ್ಲಿಗೆ ಬೀಗ ಹಾಕಿದನೊ ಗೊತ್ಲೆ. ಪೊಪ್ಪಂಗೆ ಆಪೀಸಿಲ್ಲೆ, ಅಮ್ಮಂಗೆ ನಂಗೆ ಸಾಲೆ ಇಲ್ಲೆ. ಪೊಪ್ಪ ಅಮ್ಮ ಇಬ್ರೊಬ್ರೂ ಮನೇಲೇಂತ ನಂಗೆ

ಕುಸಿಯೋ ಕುಸಿ. ಅದಕ್ಕೇ ಆ ಕೊರೊನಾಕ್ಕೊಂದು ನಮಸ್ಕಾರ. ಅಂತೂ ಕೊರೊನಾಂದಾಗಿ ಇಡೀ ದಿನ ಅಮ್ಮ ಪೊಪ್ಪ ಮನೇಲೇ ಇರ್ವಾಂಗೆ ಆತ್. ಹಂಗಾರ್ ನನ್ನೊಟ್ಟಿಗೆ ಆಡುವೊ, ಪ್ರೀತಿ ಮಾಡುವೊ, ಕತೆ ಹೇಳುವೊ, ಒಟ್ಟಿಗೆ ಮೂರು ಜನನೂ ಕುದ್ದ್ಕಂಡ್ ಉಣಕ್, ತಿನಕ್. ಆದರೆ ಏನ್ ಮಾಡ್ದು ನಾ ಕುಸಿ ಪಟ್ಟದೇ ಬಾತ್, ದೇವ್ರಿಗೆ ನಾ ಕುಸೀಲಿ ಇರ್ದು ಒಂಚೂರು ಮನ್ಸಿಲ್ಲೆ ಕಂಡದೆ. ಪೊಪ್ಪಂಗೆ ವರ್ಕ್ ಪ್ರಂ ಹೋಂ ಗಡ!! ಒಂಬತ್ತ್ ಗಂಟೆಗೇ ರೂಮಿಗೆ ಹೋಗಿ ಬಾಗ್ಲ್ ಹಾಕಂಡ್ ಕುದ್ದಂಡ್ರೆ ಹೊರಗೇ ಬಾದ್ಲೆ. ಬಾದೂ ಉಂಬಕೆ ತಿಂಬಕೆ. ಯಾವುದೋ ಮಂಡೆ ಬೆಚ್ಚಲಿ ಇದ್ದಾಂಗೆ ಸಿಡಿ ಸಿಡಿಂತಲೇ ಇದ್ದವೆ. ಎಲ್ಲವುಕೂ ಆಪೀಸ್ ಟೈಂತ ಇದ್ದರೆ ಈ ಪೊಪ್ಪಂಗೋ ಒಂದೂ ಇಲ್ಲೆ. ಯಾಗೊಳು ಕೆಲ್ಸ ಕೆಲ್ಸ ಲ್ಯಾಪ್ ಟಾಪ್ ಲಿ ಏನ್ ಮಾಡುವೆನೋ ಏನೋ. ನಾನು ಅಮ್ಮನೂ ಪ್ರೀ ಆಗಿ ಕುಸಿಲಿ ಇರೊನೋಂತ ಗ್ರೇಸಿರೆ ಬಾತಲ್ಲಾ ಆನ್ ಲೈನ್ ಕ್ಲಾಸ್!!!  ಅಮ್ಮ ಸಾಲೆಗೆ ಹೋಗಿ ಆನ್ ಲೈನ್ ಕ್ಲಾಸ್ ಮಾಡೊಕು, ಆಪ್ ಲೈನ್‌ಂತ ಏನೆಲ್ಲಾ ಮಾಡೊಕು ಗಡ. ನಂಗೆ ವಾರಲಿ ನಾಲ್ಕ್ ದಿನ ಆನ್ ಲೈನ್ ಕ್ಲಾಸ್! ದಿನಲಿ ಮೂರು ಪಿರೆಡ್!!! ಲೈನ್ ಸೆರಿ ಇದ್ದ್ ಲ್ಯಾಪ್  ಟಾಪ್ ಆನ್ ಆದರೆ ತಾನೆ ಮಿಸ್ ಕಾಂಬೊದು, ಹೇಳ್ದು ಕೇಳ್ದು. ಇಲ್ಲರೆ ಈಗ ಸೆರಿಯಾದೆ ಮತ್ತೆ ಸೆರಿಯಾದೇಂತ ಲ್ಯಾಪ್ಟಾಪ್ನ ಸುಮ್ಮನೆ ನೋಡಿಕಂಡ್ ಕುಕ್ಕುರು ಬೊಡಿಯೊಕು. ತಲೆ ಚಿಟ್ಟ್ ಹಿಡ್ದ್ ಹೋದೆ. ಈ ಕೊರೊನಾಂದಾಗಿ ಹೊರಗೆ ಎಲ್ಲೂ ಹೋಗುವಾಂಗೇ ಇಲ್ಲೆ. ಪ್ಲಾಟ್ ನ ಮಕ್ಕಳೊಟ್ಟಿಗೆ ಆಡಿಕೆ ಬುಡ್ದೇಲೆ. ಸಾಕಪ್ಪಾ ಸಾಕ್ ಒಮ್ಮೆ ಸಾಲೆ ಸುರು ಆದರೆ ಸಾಕ್ ಪ್ರೆಂಡ್ಸ್‌ಗಳೊಟ್ಟಿಗೆ ಆಡದೆ ಮಾತಾಡದೆ ಎಸ್ಟ್ ದಿನ ಆತ್? ಮಿಸ್ಗಳ ಕಾಣದೆ ಬೇಜಾರ್ ಆದೆ. ಆಟ, ಪಾಟ, ಡಾನ್ಸ್, ಹಾಡ್ ಪಾಡ್ ಒಂದೂ ಇಲ್ಲೆ. ಒಮ್ಮೆ ಸಾಲೆ ಸುರಾಗಲಿ ದೇವ್ರೇ! ಈ ಕೊರೊನಾಕ್ಕೆ ಒಂದು ದೊಡ್ಡ ನಮಸ್ಕಾರ!!!

---

**ಪಿ.ಜಿ. ಅಂಬೆಕಲ್**
ವಿಶ್ವಾಸ್ ಡ್ಯಾಪೋಡಿಲ್ಸ್, # 203 ,ರಾಮಚಂದ್ರಪುರ
ಜಾಲಹಳ್ಳಿ – ಅಂಚೆ. ಬೆಂಗಳೂರು.– –560 013.
ಮೊ.ನಂ:9481390089




# ನಾವು ನಿತ್ಯ ವ್ಯಾಯಾಮ ಮಾಡುದರಿಂದ ನಮ್ಮ ವಯಸ್ಸಿನ ಪ್ರಕ್ರಿಯೆ ನಿಧಾನ ಆದೆ



**ಡಾ. ಈಶ್ವರ ಕೆ.ಎ., ಕರ್ಣಯನ**

ನಾವು ಸದಾ ಯಂಗ್ ಆಗಿರೊಕು, ಸದಾ ಫಿಟ್ ಆಗಿರೊಕು, ಸದಾ ಲವಲವಿಕೆಯಿಂದ ಇರೋಕೆ, ವಯಸ್ಸಿನ ಪ್ರಕ್ರಿಯೆ ನಿಧಾನಗೊಳಿಸಿಕೆ, ರೋಗರುಜಿನಗಳಿಂದ ಮುಕ್ತರಾಗಿರಿಕೆ, ಸದಾ ಖುಷಿಯಿಂದ ಇರೋಕೆ, ನಾವು ಏನು ಮಾಡಕ್ ಅಂತ ನೋಡಿರೆ ದಿನದ ಒಂದರ್ಧ ಗಂಟೆ ಕ್ರೀಡೆ ವ್ಯಾಯಾಮ, ಯೋಗಾಸನ, ಸಿಮ್ಮಿಂಗ್, ಸೈಕ್ಲಿಂಗ್ ಹಿಂಗೆ ನಿಮಗೆ ಇಷ್ಟ ಇರುವಂತ ಕ್ಷೇತ್ರನ್ನ ನೀವು ದಿನದ ಅರ್ಧ ಗಂಟೆ ತೋಡಸಿಕೊಂಡರೆ ದೇಹನ ಲಾಯ್ಕ್‌ಲಿ ದಂಡಿಸಿ ಬೆವರಿಳಿಸಿರೆ ಖಂಡಿತವಾಗಿ ನಮ್ಮಲ್ಲಿ ರೋಗನಿರೋಧಕ ಶಕ್ತಿ ಜಾಸ್ತಿ ಆದೆ, ಇದರಿಂದಾಗಿ ನಾವು ತುಂಬಾ ಲಾಯ್ಕಲ್ಲಿ ಯಂಗ್ ಕಂಡವೆ ಎಂದು ನ್ಯೂಯಾರ್ಕ್ ಟೈಂಸ್ಸ್ ಲೇಖನಲ್ಲಿ ಗ್ರೆಚೆನ್ರೆನಾಲ್ಡ್ ಅವರ ಸಂಶೋಧನೆ ತಿಳಿಸಿ ಹೇಳಿಯೊಳೊ. ದೈಹಿಕ ಚಟುವಟಿಕೆ ನಮ್ಮ ಜೀವಕೋಶಗಳ್ನ ವಯಸಾಗದಂತೆ ನಿಧಾನಗೊಳಿಸಿದೆ. ಇದ್ ನೂರಕ್ಕೆ ನೂರರಷ್ಟ್ ಸತ್ಯ. ನಾವು ದೇಹನ ದಂಡಿಸಿರೆ ನಮ್ಮ ದೇಹಲಿ ಬೇಡವಾದಂತಹ ಕಲ್ಮಶವೆಲ್ಲಾ ಕೂಡ ಬೆವರಿನ ರೂಪದಲ್ಲಿ ಹೊರಹೋಗಿ ನಮ್ಮ ದೇಹ ರೋಗರುಜಿನಗಳಿಂದ ಸುಲಭವಾಗಿ ಮುಕ್ತಿಪಡೆದು ದಿನದ ಕೆಲಸನ ಲವಲವಿಕೆಂದ ಶ್ರಮವಿಲ್ಲದೆ ಸುಲಭವಾಗಿ ಮಾಡಿಕ್. ಇದೇ



ನಮ್ಮ ಕ್ರೀಡೆ, ವ್ಯಾಯಾಮಕ್ಕೆ ಇರುವಂತಹ ಒಂದು ಸಾಮರ್ಥ್ಯದ ಹೇಳಿದ್ರೆ ಕೂಡ ಈ ಮಾತು ಸುಳ್ಳಲ್ಲ.

ನಾವು ದಿನ ಅರ್ಧ ಗಂಟೆ ನಡ್ದರೂ ವ್ಯಾಯಾಮ ಮಾಡಿರೆ, ಕೂಡ ನಮ್ಮ ಜೀವಕೋಶಗ ಪುಳಕಗೊಂಡ ಕಾಲಿನಿಂದ, ತಲೆಯವರೆಗೆ ಕೂಡ ಎಲ್ಲ ಅಂಗಾಂಗಕ್ಕೆ ಕೂಡ ಸರಿಯಾದ ರೀತಿಯಲ್ಲಿ ರಕ್ತಪರಿಚಲನೆ ಅದೆ. ನಾವು ಪ್ರತಿದಿನ ವ್ಯಾಯಾಮಕ್ಕೆ ಸಮಯವನ್ನು ಮೀಸಲಿಟ್ಟರೆ, ವ್ಯಾಯಾಮ ನಮ್ಮ ಜೀವನಕ್ಕೆ ಕೆಲವು ವರ್ಷಗಳನ್ನು ಹೆಚ್ಚಿಗೆ ಸೇರಿಸಿದೆ ಹಾರ್ವರ್ಡ್ ಪಬ್ಲಿಕೇಶನ್ ವರದಿ ಮಾಡ್ತ್. ಇದರ ಅರ್ಥ ನಾವು ಯಾವಾಗಲೂ ವ್ಯಾಯಾಮ ಎಕ್ಸರ್ಸೈಸ್ ಮಾಡ್ದರೆ ನಮ್ಮ ದೇಹ, ವಯಸ್ಸ ಹೆಚ್ಚು ಕಾಲ ಬಹಳ ಆರೋಗ್ಯವಂತರಾಗಿದದೆ. ಆರೋಗ್ಯ ಕಾಪಾಡೋಕೆ ಯೋಗ, ಪ್ರಾಣಯಾಮ, ವ್ಯಾಯಾಮ ಎಲ್ಲಾ ಅಂಗಾಂಗ ಸರಿಯಾದ ರೀತಿಯಲ್ಲಿ ರಕ್ತಸಂಚಲನ ಮಾಡಿದೆ. ನಾವು ವಾರಲಿ ಮೂರು ಗಂಟೆಗಳ ಕಾಲ ವ್ಯಾಯಾಮ ಮಾಡಿರೆ ಅದು ಚರ್ಮದ ವಯಸ್ಸಿನ ಅಂತರ ತಗ್ಗಿಸಿದೆ  ಎಂದು ನ್ಯೂಯಾರ್ಕ್ ಟೈಮ್ಸ್‌ನ ವರದಿ ಹೇಳ್ದೆ. ವ್ಯಾಯಾಮದ ಪ್ರಯೋಜನವನ್ನು ನಾವು ನೋಡಿರೆ ನಮ್ಮ ಎಲ್ಲಾ ಮಾಂಸಖಂಡಗಳ ತುಂಬಾ  ಶಕ್ತಿಯುತ ನಮ್ಮ ಮೆದುಳಿನ ಆರೋಗ್ಯಕ್ಕೆ ಕೂಡ ವ್ಯಾಯಾಮ ತುಂಬಾ ಸಹಕಾರಿ. ಆರೋಗ್ಯವೇ ಭಾಗ್ಯ ಎಂಬ ಹಿಂದಿನವರ ಮಾತು ಅದೇ ರೀತಿಯಾಗಿ ನಾವು ಒಳ್ಳೆಯ ಆರೋಗ್ಯವನ್ನು ಪಡೆಯಕೆ ತುಂಬಾ ಕಷ್ಟ ಪಡಕು. ಅಷ್ಟು ಸುಲಭವಾಗಿ ನಾವು ಆರೋಗ್ಯವನ್ನು ಪಡಯದು ತುಂಬಾ ಕಷ್ಟ. ಉತ್ತಮ ಆರೋಗ್ಯ ಬೇಕಾದರೆ ನಾವು ಪ್ರತಿದಿನ ಯೋಗ, ಪ್ರಾಣಯಾಮ, ಕ್ರೀಡೆ ಅಥವಾ ಕೃಷಿಲಿ ತೊಡಗಿಸಿಕೊಂಡರೆ ಉತ್ತಮ ಆರೋಗ್ಯನ ಹೊಂದಿ ನಮ್ಮ ದೇಹ ಅತ್ಯಂತ ಹೆಚ್ಚಿನ ಶಕ್ತಿಯು ಕೂಡ ನಮ್ಮದಾದೆ. ಇದರಿಂದಾಗಿ ನಾವು ಪ್ರತಿದಿನವೂ ಕೂಡ ಬಹಳ ಖುಷಿಯಿಂದ ಲವಲವಿಕೆಯಿಂದ ಇರಕ.

ನಾವು ಪ್ರತಿದಿನ ಅರ್ಧ ಗಂಟೆಗಳ ಕಾಲ ವಾಕಿಂಗ್, ಜಾಗಿಂಗ್ ಅಥವಾ ಇತರ ಕ್ರೀಡೆಲಿ ನಮ್ಮನ್ನ ತೊಡಗಿಸಿಕೊಂಡರೆ ನಮ್ಮ ದೇಹದ ಎಲ್ಲಾ ಅಂಗಾಂಗಗಳಿಗೆ ಕೂಡ ಸರಿಯಾದ ರೀತಿಯಲ್ಲಿ ವ್ಯಾಯಾಮ ಸಿಕ್ಕಿ ರಕ್ತಪರಿಚಲನೆ ಕೊಡ ಸರಿಯಾಗಿ ಅದೆ. ಇದರಿಂದಾಗಿ ನಮ್ಮ ದೇಹ ಇರುವಂತಹ ಕಲ್ಮಶ ವಿಷ ಪದಾರ್ಥ ಬೆವರಿನಲ್ಲಿ ರೂಪಲಿ ನಮ್ಮ

ದೇಹದಿಂದ ಹೊರಹೋದೆ. ಇದರಿಂದಾಗಿ ನಮ್ಮ ದೇಹದ ಮಾಂಸಕಂಡ, ಗ್ರಂಥಿಗಳ ನರಮಂಡಲ ಉತ್ತೇಜನ ಹೊಂದಿ ನಮ್ಮ ದೇಹಲ್ಲಿ ಇರುವಂತಹ ಕೊಬ್ಬಿನಂಶವನ್ನು ಕಡಿಮೆ ಮಾಡಿದೆ. ಇಲ್ಲಿ ನಾನು ಒಂದು ಉದಾಹರಣೆ ಹೇಳ್ನೆ, ನಾವು ಒಂದು ದಿನಕ್ಕೆ 3000 ಸಾವಿರ ಕ್ಯಾಲೋರಿ ಸೇವನೆ ಮಾಡಿ 2000 ಕ್ಯಾಲರಿ ಖರ್ಚು ಮಾಡಿ ನಮ್ಮ ದೇಹಲಿ ಸಾವಿರ ಕ್ಯಾಲರಿ ಕೊಬ್ಬಿನ ರೂಪದಲ್ಲಿ ಸಂಗ್ರಹ ಅದೇ ಒಂದು ದಿನಕ್ಕೆ ಸಾವಿರ ಕ್ಯಾಲರಿ, ಒಂದು ತಿಂಗಳಿಗೆ, ಒಂದು ವರ್ಷಕ್ಕೆ, ಹತ್ತು ವರ್ಷಕ್ಕೆ ಎಷ್ಟು ಕ್ಯಾಲರಿ ಜಾಸ್ತಿ ಆದೇ ನೀವೇ ಯೋಚನೆ ಮಾಡಿ. ಇದರಿಂದಾಗಿ ನಮ್ಮ ದೇಹದಲ್ಲಿ ಕೊಬ್ಬಿನಂಶ ಬಹಳ ಸುಲಭವಾಗಿ ಶೇಖರಣೆಯಾದೆ ಇದರಿಂದಾಗಿ ನಮಗೆ ದಿನನಿತ್ಯದ ಕೆಲಸ ಮಾಡಿಕೆ ಕೂಡ ತುಂಬಾ ಕಷ್ಟ ಆದೆ. ಜಾಸ್ತಿ ಬೊಜ್ಜು ಇದ್ದರೆ ಅದು ಎಲ್ಲ ರೋಗಗಳಿಗೆ ಕೂಡ ಆಹ್ವಾನ ನೀಡಿದೆ, ಎಲ್ಲ ಸಮಸ್ಯೆಯಿಂದ ಹೊರಬರಲು ಮತ್ತೆ ನಮ್ಮ ವಯಸ್ಸಿನ ಅಂತರವನ್ನು ಕಡಿಮೆ ಮಾಡದೆ ನಾವು ಪ್ರತಿದಿನ ಅರ್ಧ ಗಂಟೆ ವ್ಯಾಯಾಮ, ನಡಿಗೆ, ಟ್ರೆಡ್ಮಿಲ್ ನಡಿಗೆ, ಸೈಕ್ಲಿಂಗ್, ಯೋಗಾಸನ, ಮನರಂಜನೆ ಕ್ರೀಡೆಲಿ ತೊಡಗಿಸಿಕೊಂಡರೆ ನಮ್ಮ ಮನಸ್ಸಿಗೆ ಉಲ್ಲಾಸ ಕೊಡ ಆದೆ, ಪ್ರೀತಿ, ಹೊಂದಾಣಿಕೆ ಮನೋಭಾವ ಗೆಲವು ಸೋಲನು ಸರಿಯಾಗಿ ಸ್ವೀಕರಿಸುವ ಸಮಾನ ಮನಸ್ಸು, ಮತ್ತೆ ನಮ್ಮ ಮಾನಸಿಕ ಆರೋಗ್ಯ ಕೂಡ ಬಹಳ ಉತ್ತಮ ರೀತಿಯಲ್ಲಿ ಬೆಳವಣಿಗೆ ಹೊಂದಿದೆ. ಮುಖ್ಯವಾಗಿ ನಾವು ನಮ್ಮ ದೇಹದ ಕೊಬ್ಬಿನಂಶ ಸುಲಭವಾಗಿ ಕರಗಿದೆ ಇದರಿಂದ ನಾವು ತುಂಬಾ ನಮ್ಮ ವಯಸ್ಸಿನ ಅಂತರವನ್ನು ಕಡಿಮೆ ಮಾಡಿಕೆ. ಯೋಗಾಸನ ರೀತಿಯ ವ್ಯಾಯಾಮ ನಾವು ಪ್ರತಿದಿನ ಮಾಡಿರೆ ನಾವು ಅಸ್ತಮಾ, ಮಧುಮೇಹ, ಪಾರ್ಶ್ವವಾಯು ಕಾಯಿಲೆಯನ್ನು ಕೊಡ ಸುಲಭವಾಗಿ ಬಗೆಹರಿಸಕ ಅಂತ ಹೇಳುತ್ತಾ ಈ ಲೇಖನವನ್ನು ವಿರಾಮ ಹೇಳ್ತಾವಳೆ.

---

**ಡಾ. ಈಶ್ವರ ಕೆ.ಎ.**
ಸಹಾಯಕ ಪ್ರಾಧ್ಯಾಪಕರು, ದೈಹಿಕ ಶಿಕ್ಷಕ ವಿಭಾಗ
ಅರಣ್ಯ ಮಹಾವಿದ್ಯಾಲಯ, ಪೊನ್ನಂಪೇಟೆ ಮತ್ತು ಅಂತಾರಾಷ್ಟ್ರೀಯ ಕ್ರೀಡಾಪಟು.
7349242442




# ಮನೆ ಮುಂದೆನ ಭಾವಜಗತ್ತ್‌ನ ರಂಗೋಲೆ



ಶ್ರೀಮತಿ ಶಿವದೇವಿ ಅವನೀಶಚಂದ್ರ

ನಂಗೆ ಒಂದ್ ಅಭ್ಯಾಸ ಉಟ್ಟು. ಬೊಳ್ಪಿಗೆ ಗಾಳಿಸೇವನೆಗೇಂತ ನಡ್ಕಂಡ್ ಹೋಕನ ಎಲ್ಲರ ಮನೆ ಮುಂದೆ ಅರಳಿರುವ ರಂಗೋಲೆ ನೋಡಿಕೊಂಡ್ ಹೋದು. ಅದರೊಳಗೆ ಹುದುಗಿರುವ ಪ್ರಾಣಿ ಪಕ್ಷಿ, ರಂಗ್ ತುಂಬಿದ ಹೂಬಳ್ಳಿಗ ಹೇಂಗೆ ಈ ಹೆಂಗಸರ ಕೈಚಳಕಲಿ ಇಷ್ಟೊಂದು ಪೊರ್ಲುಲಿ ಮೂಡಿಬಂದೊಳೋಂತ ಯೋಚನೆ ಮಾಡಿಕಣ್ತಾ ಹೋದು! ಹಾಂಗೇ ಮೇಲೆ ಮುಗಲ್‌ಗಳ ಮರೆಯಿಂದ ಇಣುಕುವ ಬಾಲಸೂರ್ಯನ ವೈಭವದ ಸವಾರಿಗೆ ಕಾರಣ ಆಗಿರುವ ಅದಕ್ಕಾಗಿ ತಯಾರಾಗಿರುವ ಮೂಡಣಲ – ನಡಿತಾ ಇರುವ ಎಲ್ಲ ಸಿದ್ಧತೆಗಳ್ನ ಗಮನಿಸ್ತಾ ಹೋದು! ನಡುನವಲಿ ಹಕ್ಕಿ ಚಿಲಿಪಿಲಿ, ಗಿಡಗಳ್‌ಲಿ ಅರಳ್ತಾ ಇರುವ ಹೂಗಳ ರಾಶಿ ಮನಸ್ಸ್‌ನ ಅರಳ್‌ಸಿಬುಟ್ಟವೆ. ಚಳಿಗಾಲ ಆದರೆ ಹೂ ಹುಲ್ಲು ಎಲೆ ತುಟಿಗಳ್‌ಲಿ ಕುದ್ದ ಹನಿಮಾಣಿಕ್ಯಗಳ ಅಂದಚೆಂದನ ನೋಡ್ತಾ ಹೋದು! ಕವಿ ಕುವೆಂಪು ಅದ್‌ಕ್ಕೇ ಹೇಳಿರ್‍ವೊ,

"ಜೀವನವನಿತುಂ ಜಪವೆನಗಾಗಿರೆ

ಜಪಮಣಿ ತಪಮಣಿ ಮೂಲೆಯದೇಕೇಂತ ಜಪ ತಪ ಮಾಡ್ತಾ

ಮಠದೊಳಗೆ ಮಂದಿರದೊಳಗೆ ಕುದ್ದರೆ ಪ್ರತಿದಿನ ಹೊಸ ಹೊಸದಾಗಿ ನಡೆವ ಈ ಪ್ರಕೃತಿ ದೇವಿನ ಪೂಜೆನ ನೋಡಿಕೆ ನಮಿಗೆ ಸಮೆ ಸಾಕಾದ್ದೆನಾ? ಒಂದು ಪದ್ಯ ನೆಪ್ಪಾದ್ದೆ,

"ಕಣ್ಣ ಮುಚ್ಚಿ ಕುಳಿತರೆ ಕಾಣುವೆ ನೀನೊಬ್ಬನೆ

ಕಣ್ಣ ತೆರೆದು ನೋಡಲು ಕಾಂಬರು ನೂರಾರು ಶಿವರು"

ನಮ್ಮ ರಸಋಷಿ ಕುವೆಂಪು ಮೂಡ್ತಾ ಇರುವ ಸೂರ್ಯನ ಕಂಡ್

'ರವಿವದನವೆ ಶಿವಸದನವೋ'ಂತಾ ಹೇಳಿಕಂಡ್, 'ಬಾ ಫಾಲ್ಗುಣ ರವಿ ದರ್ಶನಕೆ' ಇಡೀ ಜಗಮಂದಿರವೇ ಶಿವನ ವಾಸಸ್ಥಳವಾಗುಟೂಂತ

ನಮ್ಮ ಕರ್ದವೆ. ಮೈಮರ್ತವೆ ಈ ಭೂಮಿನ ಹೊಸ ಹೊಸ ರೂಪನ ಕಂಡ್. ಅದರ ಪೊರ್ಲುಗೆ ಮರ್ಳಾಗಿ! ಇಂತದರ್ಲೆ ಅವ್ಕೆ ದೇವರ ಪೂಜೆನ ಮಾಡ್ದ ಅನುಭೂತಿನೂ ಸಿಕ್ಕಿದೆ. ಪೊರ್ಲುನ ಹೀರಿಕೊಂಬ ಒಂದ್ ಹೊಸ ಒಳಗಣ್ಣ್ ಸಾ ಸಿಕ್ಕಿದೆ. ಈ ಮಹಾಕವಿನ ಪ್ರಕೃತಿವರ್ಣನೆನ ಓದ್‌ಕನ ಮತ್ತೆ ಪದಗಳ್‌ಲ್ಲಿ ಕೇಳ್‌ಕನ: ಭಾವನೆ ಮತ್ತು ದೃಷ್ಟಿ ಎರಡೂ, ಪ್ರಕೃತಿ ಸೌಂದರ್ಯನ ಹೀರಿಕಂಬ ಚಟ ಬೆಳ್ದಾಗ ಅದೊಂದು ಹೊಸ ನಮೂನೆನ ತುಡಿತ ನಮ್ಮೊಳಗೆ ಹುಟ್ಟಿದೆ. ನಮ್ಮ ದೃಷ್ಟಿ ನಮ್ಮದೇ ಮನೆಮಾರ್ನ ಪರಿಸರದ ಮೇಲೆ ಹಾರಿ ಹಂಜ ಎತ್ತರಲಿ ನಮ್ಮ ಬದ್‌ಕ್‌ಗೆ ಇರುವ ಖುಷಿಗಳ ಹುಡ್ಕಿಕಂಡ್ ಹೋಕೆ ಶುರುಮಾಡ್ದೆ. ಅದ್ಕೆ ಸರಿಸಮನಾದ ಯಾವ ಖುಷಿನೂ ಈ ಬದ್ಕ್‌ಲಿ ಸಿಕ್ಕಿಕೆ ಸಾಧ್ಯ ಇಲ್ಲೆ. ಶ್ರೀ ರಾಮಕೃಷ್ಣ ಪರಮಹಂಸರಾದ, ಬಾಲಗಂಗಾಧರ ಹೀಂಗೇ ಬಾಲ್ಯಲಿ ಗೋದಿನ ಹೊಲಲಿ ನಡ್ಕಂಡ್ ಹೋಕನ ಮೇಲೆ ಆಕಾಶಲಿ ಹಾರುವ ಬೆಳ್ಳಕ್ಕಿಗಳ ಹಿಂಡ್‌ನ ಕಂಡ್ ಭಾವಪರವಶರಾಗಿ ಮೂರ್ಛೆ ಹೋಗಿದ್ದೊ ಗಡ! ಅಂದ್‌ಂದಲೇ ಅವ್ಕೆ ಸಮಾಧಿ ಸ್ಥಿತಿನ ನಿಜವಾದ ಅನುಭವ ಆಕೆ ಶುರುವಾದ್ದ್!

ಈ ಪ್ರಕೃತಿಪೂಜೆನೇ ನಿಜವಾದ ಪೂಜೆ! ಅದರ್‌ನೇ ನಮ್ಮ ಜನ ವರ್ಷದುದ್ದಕ್ಕೂ ನಾನಾ ಹಬ್ಬಗಳ ರೂಪಲಿ ಆಚರಿಸ್ತಾ ಬಂದಿರ್‌ದು. ನಾಗರಪಂಚಮಿ, ಗೌರಿಗಣೇಶ, ಸಂಕ್ರಾಂತಿ, ಸುಗ್ಗಿಹಬ್ಬ ಹೀಂಗೆ ಈ ಬಯಲ್‌ಸೀಮೆನ ಹಳ್ಳಿಗಳ್‌ಲಿ ಆಚರಿಸುವ ಹಬ್ಬ ಪೂರ್ತಿ ಕೃಷಿಗೆ ಸಂಬಂಧಿಸಿದ ಪ್ರಾಣಿಗಳ್‌ನ್ನ ಆರಾಧನೆ ಮಾಡುವ ಹಬ್ಬ. ಆದರೆ ನಮ್ಮ ಹುತ್ತೆರಿ – ಕೈಲ್‌ಪೊಳ್ದ್‌ಗಳ ಉದ್ದೇಶನೂ ಇದೇ ಆಗುಟು.

ಕವಿ ಕುವೆಂಪುನ ಪ್ರಕೃತಿನ ಆರಾಧನೆ ಕಡೆ ಪೋಯಾ? ಅವು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ಆಗಿರಿಕನ ಯಾಗೋಳುನ ಹಾಂಗೆ ಶ್ರಾವಣಮಾಸದ ಒಂದ್ ದಿನ ಹೊತ್ತಾರೆ ವಾಯುವಿಹಾರಕ್ಕೆ ಹೋಗಿದ್ದೊ. ಆಗ ಕಂಡ ಒಂದ್ ದೃಶ್ಯನ ಅವು ವರ್ಣಿಸುದು ಹೀಂಗೆ:

ಕೆಂಪು ಕೊಕ್ಕಿನಾ ಹಸಿರು ಪುಕ್ಕದಾ
ವಿಹಗ ಬಾಣದಂದು
ಆಕಾಸವೆಲ್ಲ ಗಿಲಗಿಟ್ಟಿಯಾಗೆ,
ಹೋಯ್ತು ಗಿಳಿಯ ಹಿಂಡು

ಐವತ್ತು ವರುಷ ಐದಾಗಿ ಹೋಗಿ
ಕಂಡು ಕಂಡು ಕಂಡು
ಕವಿ ಬೆರಗು ಬಡಿದು ಕುಲಪತಿಯೆ ಕೆಡೆದು
ಹಸುಳೆತನದ ಬೆಂಡು
ತೇಲಿ ರಸಧಿಯಾ ಶಕುನಮಾಧಿಯಲಿ
ಮಗ್ನ ಮಧುವನುಂಡು ।

ಆಕಾಶಲಿ ಹಾರ್ತಾ ಇರುವ ಗಿಳಿಗಳ ಗುಂಪು ಅವ್ಕೆ 'ರುಕ್ಕಿಬಾಣ'ಗಳ ಗುಂಪುನ ಹಾಂಗೆ ಕಂಡದೆ. ಮಕ್ಕಳ ಗಿಲಗಟ್ಟಿಗಳ ಶಬ್ದದ ಹಾಂಗೆ ಗಿಳಿಗಳ ಚಿಂವ್ ಚಿಂವ್ ಶಬ್ದ ಇಂಪಾಗಿದ್ದರೆ, ಆ ಸುಖದ ಮಧುರಸನ ಕುಡಿದ್ ತಾನ್ ವಿಶ್ವವಿದ್ಯಾಲಯದ ಅತಿ ದೊಡ್ಡ ಸ್ಥಾನದಲ್ಲಿರುವ ಕುಲಪತಿ ಎಂಬ ಭಾವನೆ ಮರ್ತ್‌ಹೋಗಿ ಆ ಬೆರಗ್‌ಲಿ ತಾವು ಒಂದು ಐದ್ ವರ್ಷದ ಕೂಸ್‌ನಂಗೆ ಆ ರಸದ ಕಡಲ್‌ಲಿ ಸಮಾಧಿಸ್ಥಿತಿಲಿ ಬೆಂದ್‌ನ್ಹಾಂಗೆ ಹಗ್‌ರಾಗಿ ತೇಲ್ತಾ ಹೋದವೆ ಸೌಂದರ್ಯನ ಅನುಭವಿಸುವ ಮನುಷ್ಯ ಎಷ್ಟೇ ವಯಸ್ಸಾಗಲಿ ಒಂದ್ ಸಣ್ಣ ಕೂಸ್‌ನಾಂಗೆ ಆನಂದ ಲೋಕಲಿ ತೇಲಿಬುಟ್ಟದೆ.

1956ನೇ ಇಸ್ವಿನ ಸೆಪ್ಟೆಂಬರ್ ತಿಂಗಳ್‌ಲಿ ಒಂದು ದಿನ ಅವು ಕಂಡ ಪ್ರಕೃತಿನ ಈ ಪ್ರಸಂಗ ಮನಸ್ಸ್‌ನ ಮೇಲೆ ಎಷ್ಟೊಂದು ಪರಿಣಾಮ ಉಂಟುಮಾಡ್ದೆ ನೋಡಿ! ನಾವೂ ನೋಡುವೆ ದಿನದಿನ ಬೆಳಿಗ್ಗೆ – ಸಾಯಂಕಾಲ ಇದೇ ಸೂರ್‍ಯೋದಯ ಸೂರ್ಯಾಸ್ತಮಾನಗಳ! ಸೂರ್ಯ ಹುಟ್ಟಿಕೆ ಮೊದಲೇ ಗದ್ದೆಗಿಳ್ದವೆ. ಎತ್ತ್‌ಗಳೊಟ್ಟಿಗೆ, ಇಡೀ ದಿನ ಕಷ್ಟಪಟ್ಟ್ ದುಡಿಮೆ ಮಾಡುವೆ. ಹೊತ್ತ್ ಕಂತಿಕೆ ಸುರುವಾಕನ, ಯಾಗೊಮ್ಮೆ ದನಕರ್‌ಗಳ ಹಟ್ಟಿ ಸೇರ್‌ಸಿ ಮನೆಗೆ ಸೇರುವೇಂತಾದ್ದೆ. ಬೆಳಿಗ್ಗೆ ಅಮಸರಲಿ ಹೊರ್ಡ್‌ಕನ ಒಮ್ಮೆ ನಾವು ದುಡಿವ ಜಾಗೆಗೆ ಮುಟ್ಟಿರೆ ಸಾಕಪ್ಪಾಂತಿದ್ದೆ. ಆದರೆ ಒಂದೊಂದು ಹೆಜ್ಜೆ ಹಾಕಿಕನರೂ ಒಂದು ಸ್ವಲ್ಪ ಸಾವಧಾನ ಇದ್ದರೆ, ನಮ್ಮ ಮನಸ್‌ನ ಸ್ವಲ್ಪ ಅತ್ತ ಮಡ್‌ಗಿ ಭಾವನೆನ ಪರದೆಕೊಡೆ ನೋಡ್‌ರೆ ಬೇರೆ ಯಾವ ಪೂಜೆನೂ ಪ್ರಕೃತಿ ವ್ಯಾಪಾರದ ಮುಂದೆ ಒಂದ್ ಪೂಜೆನೇ ಅಲ್ಲ ಅಂತಾ ಮನಸ್ಸಿಗಾದೆ. ಅದ್ಕೇ ನಮ್ಮ ಕವಿ ಕುವೆಂಪು ಹೀಂಗೆ ಹೇಳುವೆ

“ಶಿವನ ಕಾಣಲು ನೀನು ಗುಡಿಗೆ ಹೋಗುವೆಯೇನು?

ನಿನ್ನ ನೇಗಿಲಗೆರೆಯ ದಿವ್ಯ ದೇವಾಲಯದಡಿ ಶಿವನ ಕಾಣೆಯ ನೀನು?” ಅಂತಾ.

“ಗುಡಿಯೊಳಿರಲು ದೇವ ಒಡೆಯನಾರೀ ಜಗವ ಕಾವ?

ವಿಗ್ರಹದೊಳಿರೆ ರಾಮ ಯಾರದೀ ಲೋಕದಾರಾಮ?” ಅಂತ ಕೇಳುವ ಪ್ರಶ್ನೆನಲಿ ಇಡೀ ಜಗವೇ ರಾಮ ವಾಸ ಮಾಡುವ ಮನೇಂತೇಳುವ ಉದಾತ್ತ ಭಾವನೆನ ಹೊಳಹು ಕಂಡದೆ ಅಲ್ಲ?

ಇನ್ನೊಂದು ಭಾವ,

“ಚೆಲುವು ಬಿಸುಪು
ಕವಿಯೆ ಬೆಣ್ಣೆ
ಕರಗಿ ಕರಗಿ ಹರಿವನು ।
ಕವಿಯೆ ಬೆಂಕಿ ಚೆಲುವೆ ಎಣ್ಣೆ
ದಗ್ಗದಗ್ಗನುರಿವನು!

ಕವಿಯ ಬೆಣ್ಣೆಯಂತ ಮನ್‌ಸ್‌ಗೆ ಪ್ರಕೃತಿ ಸೊಬಗ್‌ನ ಬಿಸಿ ತಾಂಗಿಕನ ಅದ್ ಕರ್‌ಗಿ ಕರ್‌ಗಿ ಹರ್ದದೆ. ಕವಿನ ಭಾವನೆಗಳ ಬೆಂಕಿಗೆ ಪ್ರಕೃತಿನ ಚೆಲುವು ಎಣ್ಣೆಯಾಗಿ ಸೇರ್ಕನ ಅಂವ ಮತ್ತೂ ಹೆಚ್ಚ್ ಹೆಚ್ಚ್ ಬೊಳ್ಪ್ ಕೊಡ್ತಾ ಉರ್ದದೆ. ಅವನ ಕವಿತ್ವ ಮತ್ತೂ ಪ್ರಕಾಶಮಾನ ಆದ್ದೇ... ಅಂತಾ ಕವಿನೇ ಪ್ರಕೃತಿನ ಚೆಲುವು ಮತ್ತು ಅದ್ ಜೀವಭಾವಕ್ಕೆ ಕೊಡುವ ಹೊಳ್‌ಪ್‌ನ ಬಗ್ಗೆ ಈ ಮೇಲಿನ ಸಾಲ್‌ಲಿ ಹೇಳಿಕೊಂಡೊಳೊ.

ನಾನ್ ಕವಿನ ದೊಡ್ಡ ದೊಡ್ಡ ವಿಚಾರಗಳ್ನ ಇಲ್ಲಿ ಹೇಳಿಕೆ ಹೋಗ್ತಾ ಇಲ್ಲೆ! ನಮ್ಮ ಮನ್ನೇ ಒಂದ್ ಗುಡಿ. ಅದರ್‌ಲಿ ನಾವು ಪೂಜೆ ಮಾಡುವ ದೇವರ್ ಪ್ರಕೃತಿ ಹೇಳ್‌ರೆ ಈ ನೆಲ, ಜಲ, ಆಕಾಶ! ಅದರ್‌ಲಿರುವ ಎಲ್ಲ ಹಕ್ಕಿ–ಪ್ರಾಣಿ, ಚಿಟ್ಟೆ, ಮರಗಿಡಬಳ್ಳಿ, ನದಿ, ಕೆರೆ, ಮೀನ್, ಗಾಳಿ ಮಳೆ ಹೀಂಗೇ ಹತ್ತ್ ಹಲವು ಸಂಗತಿಗ! ಬಾನಲಿ ಪ್ರತಿದಿನ ಮೂಡುವ ಸೂರ್ಯ, ಚಂದ್ರ ಮತ್ತು ಚುಕ್ಕಿ ತುಂಬಿದ ಆಕಾಶ! ಕಾನ್, ಬೆಟ್ಟ, ಗುಡ್ಡ, ತೊರೆ, ಜಲಪಾತ, ಗದ್ದೆ, ತೋಟ, ಬಯಲ್; ಹೀಂಗೇ... ಹೀಂಗೇ ನಿಮಿಗೇ ಗೊತ್ತಿರುವ ಹಾಂಗೆ...! ನಾವು ನಮ್ಮ ಒಳಗಣ್ಣ್‌ನ ತೆರ್‌ದ್ ನೋಡ್ರೆ ಈ ಎಲ್ಲ ಒಂದೊಂದು ದಿನನೂ ಒಂದೊಂದು ತರಾ ಹೊಸದಾಗಿ ಕಂಡವೆ! ನಮ್ಮ ಮನಸ್‌ಗೆ ಹೊಸ ಶಕ್ತಿ, ಬದ್‌ಕ್‌ಗೆ ಹೊಸ ದೃಷ್ಟಿ ತುಂಬುವೆ. ಅದ್ಕೇ

ಕವಿ ಕುವೆಂಪು ಹೇಳ್ದ್ ಹೀಂಗೆ

"ಜಗಮಂದಿರ ಸಮ

ಶಿವಸುಂದರ ಸುಮ

ಸಹ್ಯಾದ್ರಿಯ ಗಿರಿಶೃಂಗಕೆ ಬಾ

ಬಾ ಫಾಲ್ಗುಣ ರವಿದರ್ಶನಕೆ" ಅಂತಾ.

ನಾವೂ ಹಾಂಗೇ ಈ ಬದ್ಕ್‌ನ ಹೊಸ ದೃಷ್ಟಿಂದ ನೋಡಿಕೆ ಶುರುಮಾಡೊನ ಅಲ್ಲಾ? ಒಂದಸ್ಟ್ ಹಕ್ಕಿಹಾಡ್, ತಂಪು ಗಾಳಿ, ಬಣ್ಣ ಬದಲಾಯಿಸುವ ಹಗಲ್, ತಂಪು ಕೊಡುವ ರಾತ್ರಿ, ಮಳೆ ಬಿಸ್‌ಲ್! ಆವ ನಾವುನೂ ಸ್ವಲ್ಪ ಭಾವಪ್ರಪಂಚದೊಳಗೆ ಹೊಕ್ಕಿ ನಮ್ಮ ನೋವುಗಳ್ಗೆ, ದುಃಖಗಳ್‌ಗೆ, ಸೋಲುಗಳ್‌ಗೆ ಸ್ವಲ್ಪ ಮುಲಾಮು ಹಾಕಿಕಂಬಕೆ ಆದೋ ನೋಡೊಮೊ!

ಯಾಗ, 'ಆ ಸಹ್ಯಾದ್ರಿ' ನಮ್ಮ ಬ್ರಹ್ಮಗಿರಿಗೆ ಸಾಟಿ

'ಆ ತುಂಗೆ' ನಮ್ಮ ಕಾವೇರಿಗೆ ಸಮ ಅಂತಾ ನಾವು ತಿಳ್ಕಂಡವೆನೋ ಆವ' ಕವಿನ ಮನಸ್‌ನ ಭಾವನೆಗಳ ತೊರೆ ನಮ್ಮ ಎದೆ ಎದ್‌ಗಳ್‌ಲ್ಲೂ ಹುಟ್ಟೂದು ಹಾಂಗಾಗಲಿ ಅಲ್ಲಾ!

ಪ್ರಕೃತಿಯಾರಾಧನೆಯೇ ಪರಮಾತ್ಮನಾರಾಧನೆ – ಕುವೆಂಪು.

---

**ಶ್ರೀಮತಿ ಶಿವದೇವಿ ಅವನೀಶಚಂದ್ರ**

ಸುಳ್ಯಕೋಡಿ



**ಕತಾ ಜೊಂಪೆ**



# ಮಾನವೀಯತೆನ ಬೆಲೆ



**ದೀಕ್ಷಾ ಕೆ.ಐವರ್ನಾಡು**

ಸುಬ್ಬಣ್ಣ–ಗಂಗಾ ದಂಪತಿಗೆ ಗಂಡು ಮಕ್ಕ ಇಲ್ಲೆ, ಎರ್ಡ್ ಜನ ಹೆಣ್ಮಕ್ಕ. ದೊಡ್ಡವ್ಳು ಭವ್ಯ, ಸಣ್ಣವ್ಳು ದಿವ್ಯ. ನಾಕ್ ಎಕ್ರೆ ಜಾಗೆ ಉಟ್ಟು. ಇಬ್ಬರ್ ಗೂಡೆಗಳ ಲಾಯ್ಕ್ ಓದ್ಸಿದೋ. ಯಾವುದಕ್ಕೂ ಕಮ್ಮಿ ಮಾಡ್‌ತ್ಲೆ. ಡೊಡ್ಡವಳ ಎಂ ಕಾಂ., ಸಣ್ಣವಳ ಇಂಜಿನಿಯರಿಂಗ್ ಓದ್ಸಿದೊ. ಮಕ್ಕಳು ಹಾಂಗೆ ಲಾಯ್ಕ ಕಲ್ತವೆ. ದೊಡ್ಡವ್ಳು ಒಂದ್ ಒಳ್ಳ ಕಂಪನಿಗೆ ಆಯ್ಕೆ ಆತ್. ಒಳ್ಳ ಸಂಬಳ. ನಿಧಾನಕೆ ಸಣ್ಣವ್ಳು ಕೆಲ್ಸಕೆ ಸೇರ್ದ. ಸುಬ್ಬಣ್ಣಂಗೆ ಬಾರಿ ಕುಸಿ ಆದೆ. ಇತ್ತ ಮಕ್ಕಳ ವಿದ್ಯಾಬ್ಯಾಸ ಮುಕ್ತ್ ತಾಕನ ಮದ್ವೆ ಮಾಡಿಕೆ ಮಂಡೆ ಬೆಚ್ಚ ಸುರಾದೆ. ಇಬ್ಬನ್ರ್ನು ಒಳ್ಳ ಸಿರಿಮಂತರ ಮನೆಗೆ ಕೊಡೊಕುಂತ ಸುಬ್ಬಣ್ಣನ ಆಸೆ. ಭವ್ಯಂಗೆ ಹೈದ ಹುಡ್ಕಿಕೆ ಸುರು ಮಾಡ್ದೆ ಸುಬ್ಬಣ್ಣ. ಈ ವಿಷಯ ತಿಳ್ದ ಭವ್ಯ, ರಾಕೇಶ್‌ನ ಪ್ರೀತಿ ಮಾಡ್ವ ವಿಸಯ ಹೇಳ್ದ್. ಸುಬ್ಬಣ್ಣನ ಪಿತ್ತ ನೆತ್ತಿಗೇರ್ದ. ಹೋಗಿ ಹೋಗಿ ಪರ ಜಾತಿ ಹೈದನೇ ಸಿಕ್ಕಿದ ನಿಂಗೆ ಹೇಳಿ ಕೆಪ್ಪೆಗೆರ್ಡು ಬಾರ್ಸಿದೆ. ನಾವ್ ಹೇಳ್ದ ಹೈದನ ಮದ್ವೆ ಆಕುತ ಹೇಳ್ತ್. ಗೂಡೆ ಸುಮಾರ್ ಸಲ ಕೇಳ್ದೆ ಹೈದನ ಬಗ್ಗೆ ಎಲ್ಲಾ ಹೇಳ್ದೆ ಮನೆಲಿ, ಆದರೆ ಸುಬ್ಬಣ್ಣ ಮಗಳ ಮಾತಿಗೆ ಬೆಲೆನೆ ಕೊಟ್ಟತ್ಲೆ. ಸುಬ್ಬಣ್ಣ ಮಾರ್ನೆ ದಿನನೆ ಒಂದು ಹೈದನ ಕಡೆಯವರ ಗೂಡೆ ನೋಡಿಕೆ ಬಾಕೆ ಹೇಳ್ವೆ. ಈ ವಿಷಯನ ಭವ್ಯ, ರಾಕೇಶ್‌ಗೆ ಹೇಳ್ದ್. ರಾಕೇಶ್‌ನ ಮನೆಲಿ ಲವ್ ಮ್ಯಾರೇಜ್‌ಗೆ ಒಪ್ಪಿಕೊಂಡವೆ, ಆದರೆ ಗೂಡೆ ಮನೆಲಿ ಏನ್ ಹೇಳ್ರು ಒಪ್ಪಿತ್ಲೆ. ಕಡೆಗೆ ಇಬ್ಬರು ರಿಜಿಸ್ಟರ್ ಮ್ಯಾರೇಜ್ ಅಗೊನೊತ ನಿರ್ಧಾರಕ್ಕೆ ಬಂದ್ ಮದ್ವೆ ಮಾಡಿಕಂಡ್ ಆಶೀರ್ವಾದ ಕೇಳಿಕೆ ಗೂಡೆ ಮನೆಗೆ ಬಾಕನ ಸುಬ್ಬಣ್ಣ–ಗಂಗಾ ದಂಪತಿಗೆ ಬಾರಿ ಬೆಚ್ಚ ಆದೆ. ಹಾಳಾಗಿ ಹೋಗಿತಾ ಶಾಪ ಹಾಕ್ವೆ. ಇಲ್ಲಿಗೆ ಮನೆ ಋಣ ತೀರ್ತ್, ಇನ್ನು ನಂಗೆ ನಿಂಗೆ ಯಾವ ಸಂಬಂಧವೂ ಇಲ್ಲೆ ತೇಳಿ ಕಳ್ಸುವೆ. ಗೂಡೆ ಕಣ್ಣೀರ್ ಹಾಕಂಡ್ ಹೈದನ ಮನೆಗೆ ಹೋದೆ. ಹೈದನ ಮನೆಲಿ ಲಾಯ್ಕಿಲಿ ನೋಡಿ ಕಂಡಿವೆ. ಗೂಡೆ

ನಿಧಾನಕ್ಕೆ ಬೇಜಾರ್ ಪೂರಾ ಮರ್ತ್‌ದೆ. ಅತ್ತೆ ಮಾವಂಗೆ ಹೊಂದಿಂಡ್ ಹೋದೆ.

ಇತ್ತ ಸುಬ್ಬಣ್ಣ ದಂಪತಿಗ ಊರ್ನ ಜನಗಳ ಚುಚ್ಚುಮಾತ್‌ಂದ ಬಾರಿ ಸಂಕಟ, ಅವಮಾನ ಪಟ್ಟವೆ. ಅಪ್ಪ ಅಮ್ಮನ ದಿವ್ಯ ಸಮಾಧಾನ ಮಾಡ್ದೆ. ನಿಧಾನಕೆ ಎಲ್ಲಾ ಮರ್ತವೆ. ಹೋದ ಮರ್ಯಾದಿನ ಇನ್ನೊಬ್ಬಳ ಸರಿಲೀ ಮದ್ವೆ ಮಾಡಿ ಪಡ್ಕಣಕುತ ನೆನ್ಸಿಕಂಡವೆ. ಇತ್ತ ದಿವ್ಯಂಗೆ ಒಂದು ಶ್ರೀಮಂತ ಹೈದ ನಾ ನೋಡಿ ಭಾರಿ ಆಡಂಬರಲಿ ಮದ್ವೆ ಮಾಡ್ವೆ. ಊರು ತುಂಬಾ ಕೊಚ್ಚಿಕೊಂಡು ಬಂದದೆ, ಸುಬ್ಬಣ್ಣಂಗೆ ಈಗ ಸಮಾಧಾನ ಆದೆ.

ಮದ್ವೆ ಆದ ಸುರುಲಿ ಲಾಯ್ಕ ಇದ್ದ ದಿವ್ಯಂಗೆ ನಿಧಾನಲಿ ಹೈದನ ಕಡಯವು ಕಿರುಕುಳ ಕೊಡಿಕೆ ಸುರು ಮಾಡ್ವೆ. ಆದರೆ ಈ ವಿಷ್ಯನ ಮನೆಲಿ ಹೇಳದೆ ಮನಸ್ಲೆ ದುಃಖ ನುಂಗಿಕೊಂಡದೆ ದಿವ್ಯ. ಇತ್ತ ಸುಬ್ಬಣ್ಣ ಅಳಿಯ ತಮ್ಮ ಲಾಯ್ಕ ನೋಡ್ದು ಹೇಳಿ ಆಸ್ತಿನ ಪೂರಾ ದಿವ್ಯನ ಗಂಡನ ಹೆಸ್ರಿಗೆ ಬರ್ದು ಕೊಟ್ಟದೆ. ಇನ್ನು ನಾವ್ಗೆ ಮಂಡೆಬೆಚ್ಚ ಇಲ್ಲೆ ಎಲ್ಲಾ ಅಳಿಯ ನೋಡಿ ಕಂಡದೆತಾ ಗಂಗಂಗೆ ಹೇಳ್ವೆ. ಒಂದು ದಿನ ನಡು ಮಧ್ಯಾನ ಫೋನ್ ರಿಂಗಾದೆ, ಕಾಲ್ ರಿಸೀವ್ ಮಾಡ್ದ ಸುಬ್ಬಣ್ಣಂಗೆ ಶಾಕ್ ಆದೆ, ದಿವ್ಯ ಆತ್ಮಹತ್ಯೆ ಮಾಡಿಕೊಂಡ ವಿಷಯ ತಿಳ್ಸಿ ಕಾಲ್ ಕಟ್ ಮಾಡ್ವೆ. ಸುಬ್ಬಣ್ಣ ದಿವ್ಯನ ಮನೆಗೋಗಿ ನೋಡ್ಕನಾ ನಿಜ ವಿಷಯ ಗೊತ್ತಾದೆ. ದಿವ್ಯನ ಡೆತ್ ನೋಟ್ ನೋಡಿ ಎಲ್ಲಾ ಸತ್ಯ ಗೊತ್ತಾಕನ ಸುಬ್ಬಣ್ಣ ತಲೆ ತಿರ್ಗಿ ಬಿದ್ದವೆ. ಚಿನ್ನ, ಆಸ್ತಿಗೋಸ್ಕರ ಮದ್ವೆ ಆಗಿರ್ದು, ಅದಲ್ಲದೆ ಅವಂಗೆ ಇನ್ನೊಂದು ಮದ್ವೆ ಆಗಿರ್ದು ಗೊತ್ತಾದೆ. ಸುಬ್ಬಣ್ಣ–ಗಂಗಾ ದಂಪತಿಗಳಿಗೆ ದಿಕ್ಕೇ ತೋಚದಂತಾದೆ. ಭಾರಿ ಬೇಜಾರ್‌ಲೀ ದಿನ ಕಳ್ದವೆ. ಮುಂದಿನ ಪರಿಸ್ಥಿತಿ ಬಗ್ಗೆ ಯೋಚನೆ ಮಾಡ್ವೆ.

ದಿವ್ಯ ಆತ್ಮಹತ್ಯೆ ಮಾಡಿಕುಂಡ ವಿಷಯ ಭವ್ಯಂಗೆ ಗೊತ್ತಾಗಿ ಅಪ್ಪ ಅಮ್ಮನ ನೆಂಪಾದೆ. ಭಾರಿ ಬೇಜಾರಲಿ ರಾಕೇಶ್ ಮತ್ತೆ ಮಕ್ಕಳ ಕಕುರ್ಂಡು ಅಪ್ಪ ಅಮ್ಮನ ನೋಡಿಕೆ ಕಾರ್‌ಲಿ ಹೋದವೆ. ಕಾರ್ ಬಂದು ಜಾಲ್ನ ಕರೆಲಿ ನಿಲ್ಲ್‌ಕನ ಸುಬ್ಬಣ್ಣ ಹೊರಗೆ ಬಂದವೆ. ಅಪ್ಪ–ಅಮ್ಮ ಪರಿಸ್ಥಿತಿ ನೋಡಿ ಭಾರಿ ಸಂಕಟ ಪಟ್ಟದೆ ಭವ್ಯ. ಸಣ್ಣ ಮಗಳ ಸಂಸಾರ ಹಾಳಾತ್, ದೊಡ್ಡ ಮಗಳ ಸಂಸಾರ ಸರಿ ಉಟ್ಟಲ ಹೇಳಿ ಹಂಞ ಸಮಾಧಾನ ಆದೆ ಸುಬ್ಬಣ್ಣಂಗೆ. ಭವ್ಯಂಗೆ ತನ್ನ ತವರುಮನೆ ಸ್ಥಿತಿ ನೋಡಿ ಭಾರಿ

ಬೇಜಾರಾದೆ. ರಾಕೇಶ್ ಅತ್ತೆ–ಮಾವಂಗೆ ಸಮಾಧಾನ ಮಾಡ್ದೆ. ಆದ್ ಆಗಿಹೋತ್. ನೀವ್ಗೆ ನಾವು ಒಳೊ ತೇಳಿ ಸಮಾಧಾನ ಮಾಡ್ದೆ. ಅಂದು ಶಾಪ ಹಾಕಿದ ಕೈಗ ಇಂದು ಆಶೀರ್ವಾದ ಮಾಡ್ದೊ. ಜಾತಿ ಮುಖ್ಯ ಅಲ್ಲ ಮಾನವೀಯತೆ ಮುಖ್ಯ ಮಾನವೀಯತೆನ ಶ್ರೀಮಂತಿಕೆಂದ ಪಡಿಯಕಾದ್ಲೆತ ಅರ್ತ ಆದೆ ಸುಬ್ಬಣ್ಣಂಗೆ. ಇಬ್ಬನ್ರ್ನ ರಾಕೇಶ್ ತನ್ನ ಮನೆಗೆ ಕಕೊರ್ಂಡು ಹೋದೆ. ಅತ್ತೆ–ಮಾವನ ಲಾಯ್ಕಲಿ ನೋಡಿ ಕಂಡದೆ. ಪುಳ್ಳಿಕಳೊಟ್ಟಿಗೆ ಆಟ ಆಡಿಕಂಡ್ ನಿಧಾನಕೆ ಎಲ್ಲಾ ಮರ್ತವೆ ಸುಬ್ಬಣ್ಣ ದಂಪತಿಗ.

**ದೀಕ್ಷಾ ಕೆ. ಐವರ್ನಾಡು**
ಐವರ್ನಾಡು ಅಂಚೆ ಮತ್ತು ಗ್ರಾಮ
ಸುಳ್ಯ ತಾಲೂಕು, ದ.ಕ. – 574239




# ಕಚ – ದೇವಯಾನಿ

●

**ಕುಂಞಟಿ ಶಿವರಾಮ  ಗೌಡ (ವ್ಯಾಸ)**

ಪುರಾಣ ಕಾಲಲಿ ದೇವತೆಗಳಿಗೂ ರಾಕ್ಷಸರಿಗೂ ಮೂರು ಲೋಕದ ಅದಿಪತ್ಯಕ್ಕಾಗಿ ಯಾಗೋಳು ಯುದ್ಧ ನಡೆತಿತ್ತ್. ದೇವತೆಗಳ ಗುರು ಬ್ರಹ್ಮತಿ ಬಾರಿ ದೊಡ್ಡ ವಿದ್ವಾಂಸ ಮತ್ತೆ ವೇದವೇದಾಂಗನ ತಿಳ್ದಂವ. ರಾಕ್ಷಸರ ಗುರು, ಶುಕ್ರಾಚಾರ್ಯರ್ ತಮ್ಮ ವಿಶೇಸ ಜ್ಞಾನಸಕ್ತಿಂದ ಮಾರ್ಗದರ್ಸನ ಮಾಡ್ತಿದ್ದೊ. ಯಾಗೊಳು ಯುದ್ದಲಿ ರಾಕ್ಷಸರ ಕೈ ಮೇಲಾತಿತ್ತ್. ದೇವತೆಗ ಪೆಟ್ಟ್ ತಿಂದ್ ಮುಂದೆ ದಾರಿ ಗೊತ್ತಾಗದೆ, ಬಾರಿ ದುಕ್ಕಲಿ ದಿನ ಕಳೆತಿದ್ದೊ. ಇದ್‌ಕ್ಕೆ ಕಾರಣ ಏನ್‌ಂತೇಳ್ರೆ, ಸತ್ತವರ ಬದ್‌ಕುಸುವ 'ಸಂಜೀವಿನಿ' ವಿದ್ಯೆ ಶುಕ್ರಾಚಾರ್ಯರ್ಂಗೆ ಮಾತ್ರ ಗೊತ್ತಿತ್ತ್. ಹಾಂಗೆ ಹೋರಾಟಲಿ ಸತ್ತ ರಾಕ್ಷಸರ್ ಶುಕ್ರಾಚಾರ್ಯರ ವಿಶೇಷ ಸಕ್ತಿಂದ ಬೊದ್‌ಕಿ ಬಾತಿದ್ದೊ. ಇದ್ ದೇವತೆಗಳಿಗೆ ಒಂದು ದೊಡ್ಡ ಕೊರತೆನ ತಂದಿಸಿತ್.

ದೇವತೆಗೆಲ್ಲ ಸೇರಿ ಒಮ್ಮೆ ಬ್ರಹಸ್ಪತಿನ ಮಂಜ ಕಚನಕ್ಕಲೇ ಹೋಗಿ ಅವನ ಸಾಯ ಕೇಳ್ವೆ. ನೀ ಶುಕ್ರಾಚಾರ್ಯರಲ್ಲಿಗೆ ಹೋಗಿ ಅವರ ಶಿಷ್ಯ ಆಗಿ ಅವರ್‌ಂದ ಸಂಜೀವಿನಿ ವಿದ್ಯೆ ಕಲ್ತ್ ಬಂದ್ ನಾವ್ಗೆ ಉಪಕಾರ ಮಾಡೊಕುಂತ ವಿನಂತಿ ಮಾಡ್ವೆ.

ದೇವತೆಗಳ ಮಾತ್‌ನಂಗೆ ಕಚ ಶುಕ್ರಾಚಾರ್ಯರಲ್ಲಿಗೆ ಹೋಗಿ ಹೇಳ್ದೆ "ನಾ ದೇವತೆಗಳ ಗುರು ಬ್ರಹಸ್ಮತಿನ ಮಂಜ, ನನ್ನ ನೀವು ಶಿಷ್ಯಂತ ಸ್ವೀಕರ್ಸಿ ಎಲ್ಲಾ ವಿದ್ಯೆ ಬುದ್ಧಿ ಕಲ್ಸಿ ನನ್ನ ಉದ್ಧಾರ ಮಾಡೊಕುಂತ ಕಾಲಿಗೆ ಅಡ್ಡ ಬಿದ್ದದೆ. ಯೋಗ್ಯ ಶಿಷ್ಯ ಬಂದ್ ಗುರುನೊಟ್ಟಿಗೆ ಶಿಷ್ಯತ್ವ ಬೇಡ್ರೆ. ಅದರ ತಿರಸ್ಕರ್ಸಿಕೆ ಬೊತ್ತುಂತ ಅಂದಿನ ನಿಯಮ. ಹಾಂಗೆ ಶುಕ್ರಾಚಾರ್ಯರ್ ಕಚನ ಶಿಷ್ಯಂತ ಸ್ವೀಕಾರ ಮಾಡ್ದೊ. ಕಚ ತುಂಬಾ ವರ್ಸ ಗುರುನ ಸೇವೆ ಮಾಡಿಕಂಡ್ ಶುಕ್ರಾಚಾರ್ಯರ ಆಶ್ರಮಲಿ ದಿನ ಕಳೆತಾ ಇತ್ತ್.

ಶುಕ್ರಾಚಾರ್ಯರ್ಂಗೆ ದೇವಯಾನಿಂತ ಬಾರಿ ರೂಪಿನ ಒಬ್ಬ ಮಗಳ್ ಇತ್ತ್. ಅವಳ ಗುಣರೂಪಂದ ಆಶ್ರಮಲಿ ಎಲ್ಲಾ ಶಿಷ್ಯರ ಗೌರವ ಅವ್‌ಳಿಗೆ

ಸಿಕ್ಕ್‌ತಿತ್ತ್. ಕಚ ಬಿಡು ಸಮಯಲಿ ದೇವಯಾನಿಗೆ ಸಂಗೀತ ಮತ್ತೆ ನೃತ್ಯನ ಹೇಳಿಕೊಡ್ತಾ ಇತ್ತ್. ಆದ್ರೂ ಅಂವ ಬ್ರಹ್ಮಚರ್ಯ ವೃತನ ಕಟ್ಟ್‌ನಿಟ್ಟ್‌ಲಿ ಅನುಸರ್ಸಿ ಕಂಡ್ ಹೋತಿತ್ತ್.

ಕಚ ಶುಕ್ರಾಚಾರ್ಯರಲ್ಲಿ ಶಿಷ್ಯ ಆಗಿ ಸೇರ್ದ ವಿಸಯ ರಾಕ್ಷಸರಿಗೆ ಗೊತ್ತಾಗಿ ದೇವತೆಗಳ ಒಳ ಉದ್ದೇಸ ಅರ್ತ ಆತ್. ಏನಾರ್ ಒಂದು ಉಪಾಯ ಮಾಡಿ ಕಚ ಸಂಜೀವಿನಿ ವಿದ್ಯೆ ಪಡ್ಯದಂಗೆ ರಾಕ್ಷಸರ್ ಸಮಯ ಕಾಯ್‌ತಾ ಇದ್ದೊ.

ಒಮ್ಮೆ ಕಚ ಗುರು ಶುಕ್ರಾಚಾರ್ಯನ ಗೋವುಗಳ ಕಾಡ್‌ಲಿ ಮೇಸ್‌ತಾ ಇರ್ಕನ, ರಾಕ್ಷಸರ್ ಅವನ ಕೊಂದ್ ಮಾಸನ ನಾಯಿಗಳಿಗೆ ಹಾಕಿ ಹೋದೊ. ಗೋವುಗ ಕತ್ತಲಾವ ಸಮಯಕೆ ಬಂದ್ ಮುಟ್ಟಿರೂ ಕಚನ ಪತ್ತೆ ಇಲ್ಲೆ. ದೇವಯಾನಿಗೆ ಬಾರಿ ದುಕ್ಕಾತ್. ಅವುಳು ಅಪ್ಪನಕ್ಕಲೆ ಹೋಗಿ ಕಚಂಗೆ ಏನೋ ಅಪಾಯ ಆವುಟುಂತ ಕಣ್ಣೀರ್ ಹಾಕಿ ಹೇಳ್ತ್. ಮಗಳ ದುಕ್ಕನ ನೋಡಿ ಶುಕ್ರಾಚಾರ್ಯರ್ 'ಸಂಜೀವಿನಿ' ವಿದ್ಯೆನ ಮೂಲಕ ಕಚನ ಜೀವಂತ ಮಾಡ್ದೊ. ದೇವಯಾನಿ ಕೇಳ್ಕನ ಕಚ ಕಾಡಿಲಿ ನಡ್ದ ಕತೆನ ಹೇಳ್ತ್. ನಾ ಸತ್ತ್ ಹೋದೆ, ಆದರೆ ವಾಪಾಸ್ ಜೀವ ತುಂಬಿ ಬಂದದ್ ಹೇಗೆಂತ ನಂಗೆ ಆಶ್ಚರ್ಯ ಆತ್.

ಇನ್ನೊಮ್ಮೆ ದನ ಮೇಸ್‌ತಿರ್ಕನ ರಾಕ್ಷಸರ್ ಕಚನ ಹಿಡ್ದ್ ಕೊಂದ್ ಸರೀರನ ಅರ್ದ್ ಹೊಡಿ ಮಾಡಿ ಸಮುದ್ರ ನೀರ್‌ಲಿ ಹಾಕಿದೊ. ಸೂರ್ಯ ಕಂತಿರೂ ಗೋವುಗ ಬಂದ್ ತುಂಬಾ ಹೊತ್ತಾದರೂ ಕಚನ ಕಾಣದೆ ದೇವಯಾನಿ ದುಕ್ಕ ತಡೆಕಾಗದೆ ಅಪ್ಪನಲ್ಲಿ ಹೋಗಿ ವಿಸಯ ತಿಳ್ಸಿತ್. ದಿವ್ಯದೃಷ್ಟಿಲಿ ನೋಡ್ಕನ ರಾಕ್ಷಸರ್ ಮಾಡ್ದ ಅತ್ರವಣ ಶುಕ್ರಾಚಾರ್ಯರಿಗೆ ತಿಳ್ದ್ ಹೋತ್. ಹಿಂದೆನಂಗೆ 'ಸಂಜೀವಿನಿ'ನ ಶಕ್ತಿಲಿ ಕಚ ಬೊದ್ಕಿ ಬಾತ್.

ಎರ್ಡ ಸರ್ತಿ ಕಚನ ಕೊಂದರೂ ಶುಕ್ರಾಚಾರ್ಯರ್ ಅಂವನ ಬೊದ್ಕಿಸಿದರ ನೋಡಿ ರಾಕ್ಷಸರ್ ಮತ್ತೊಮ್ಮೆ ಕಾಡಿಲಿ ಕಚನ ಕೊಂದು ಶರೀರನ ಸುಟ್ಟು ಬೂದಿನ ಕಳ್ಳ್‌ಲಿ ಮಿಶ್ರ ಮಾಡಿ ಗುರುಗಳಿಗೆ ಬಾರಿ ಬಕ್ತಿಲಿ ಕುಡೆಕೆ ಕೊಟ್ಟೊ. ಹಿಂದೆನಾಂಗೆ ಕಚ ಸಮಯಕ್ಕೆ ಬಾರದೆ ದುಕ್ಕ ತಡೆಕಾಗದೆ ದೇವಯಾನಿ ಅಪ್ಪನ ಹಕ್ಕಲೆ ಹೋಗಿ ಕಣ್ಣೀರ್ ಹಾಕಿಕಂಡ್ ಹೇಳ್ದೆ "ಕಚನ ಕಾಣದೆ ನನ್ನ ಜೀವ ವೊಳೆಕಿಲ್ಲೆ, ಅಂವನ ಹಿಂದೆನಂಗೆ ಜೀವಂತ ಮಾಡೊಕುಂತ ಮರ್ಡ್‌ತಾ" ಒತ್ತಾಯ ಮಾಡ್ತ್. ದಿವ್ಯ ದೃಷ್ಟಿಲಿ

ನೋಡ್ಕನ ಶುಕ್ರಾಚಾರ್ಯರಿಗೆ ರಾಕ್ಷಸರ್ ಮಾಡ್ದ ಕೆಣಿ ಅರ್ತ ಆತ್.

ಮಗಳಿಗೆ ಹೇಳ್ವೆ, "ಮಗಳೇ ನಾ ಎರ್ಡ್ ಸರ್ತಿ ಕಚನ ಬೊದ್ಕಿಸಿದೆ. ಆದರೆ ರಾಕ್ಷಸರ್ ಅಂವನ ಕೊಲ್ಲಿಕೆ ಪ್ರಯತ್ನ ಮಾಡ್ತಾ ವೊಳೊ. ಹುಟ್ಟಿದಂವ ಯಾಗಾರ್ ಒಂದು ದಿನ ಸಾಯಕೇ. ಇದ್ ಪ್ರಕೃತಿ ನಿಯಮ. ಇದ್ಕೆ ನೀ ದುಕ್ಕ ಮಾಡ್ದು ಸರಿಯಲ್ಲ"ಂತ ನಾನಾ ರೀತಿಲಿ ಮಗಳಿಗೆ ಬುದ್ಧಿ ಹೇಳ್ವೆ. ಅಂವನ ಮರ್ತ್ ಬುಡು ನಿನ್ನ ಯೌವನ ಜೀವ ಮುಂದೆನ ಆಲೋಚನೆ ಮಾಡ್‌ಂತ ಹೇಳ್ದೊ.

ಎಷ್ಟ್ ಬುದ್ದಿವಾದ ಹೇಳ್ರೂ ಕೇಳದೆ ಕಚ ಆಶ್ರಮಲಿ ಮಾಡ್ದ ಸೇವೆ, ಅವಳ ತುಂಬಾ ಆದರಂದ ನೋಡ್ತಿದ್ದ ಅಂವನ ಮರೆಕೆ ಆತ್‌ಲೆ. ಕಚನ ಹುಡ್ಕಿ ತಾತ್ಲಾರ್ ನನ್ನ ಜೀವ ಒಳೆಕಿಲ್ಲೆಂತ ಬೊಬ್ಬೆ ಹಾಕಿ ಮರ್ಡಿಕೆ ಸುರುಮಾಡ್ತ್ ದೇವಯಾನಿ. ಹಿಂದೆನಾಂಗೆ 'ಸಂಜೀವಿನಿ' ವಿದ್ಯೆನ ಮೂಲಕ ಕಚನ ಬದ್ಕಿಸ್‌ಕೆ ಶುಕ್ರಾಚಾರ್ಯರ್ ಪ್ರಯತ್ನ ಪಡ್ಕನ ರಾಕ್ಷಸರ್ ಮಾಡ್ದ ಅನ್ಯಾಯ ಗೊತ್ತಾತ್. ಕಚ ಹೊಟ್ಟೆಂದಲೇ ವಿಷಯ ತಿಳ್‌ಸ್‌ಕನ ಶುಕ್ರಾಚಾರ್ಯರಿಗೆ ರಾಕ್ಷಸರ ಮೇಲೆ ಬಾರಿ ಸಿಟ್ಟ್ ಬಂದ್ ಅವರ ಕೊಲ್ಲೊಕುಂತ ಮನ್ಸಿಲಿ ಯೋಚನೆ ಮಾಡ್ದೊ. ಆ ಸಂದರ್ಭಲಿ ಶುಕ್ರಾಚಾರ್ಯರ್ ಲೋಕಕೆ ಒಂದ್ ಸಂದೇಶ ಕೊಟ್ಟವೆ. ಯಾರ್ ಒತ್ತಾಯ, ಆಮಿಸಕ್ಕೆ ಬಲಿಯಾಗಿ ಮದ್ಯಪಾನ ಮಾಡ್ವೆ ಅವರ ಜೀವನ ನಿಕೃಷ್ಟ ಮಟ್ಟಕ್ಕೆ ಹೋದ್ದೆ. ಅಂವ ಲೋಕಲಿ ಎಲ್ಲರ ತಿರಸ್ಕಾರಕ್ಕೆ ಒಳಗಾದೆಂತ ಒಂದು ನಿತ್ಯ ಸತ್ಯನ ನಾವ್ಗೆ ಕೊಟ್ಟೊಳೊ.

ದೇವಯಾನಿನ ಹಕ್ಕಲೆ ಕರ್ದ್ ಹೇಳ್ವೆ ಶುಕ್ರಾಚಾರ್ಯರ್, "ಮಗಳೇ, ಈಗ ಸಮಸ್ಯೆ ಬಾರಿ ಗಂಬೀರ ಆವುಟು. ಈಗ ಕಚ ಜೀವಂತ ಬರೋಕಾದರೆ ನನ್ನ ಹೊಟ್ಟೆ ವೊಡ್ದ್ ಹೊರಗೆ ಬರೊಕು. ಆಗ ನಾ ಸತ್ತನೆ. ಅಂವ ಜೀವಂತ ಬರೋಕಾದರೆ, ನನ್ನ ಸಾವು ನಿಶ್ಚಯ"ಂತ ಹೇಳ್ದೊ. "ನಿಮ್ಮಲ್ಲಿ ಯಾರೊಬ್ಬೊರೂ ಇಲ್ಲದಿದ್ದರೆ ನನ್ನ ಸಾವು ನಿಶ್ಚಯ. ನೀವಿಲ್ಲದೆ ನಂಗೆ ಈ ಜೀವ ಬೇಡಂತ ಖಂಡಿತ ಹೇಳ್ತ್" ದೇವಯಾನಿ.

ಶುಕ್ರಾಚಾರ್ಯರ್ ಹೊಟ್ಟೆವೊಳಗೆ ಇರ್ವ ಕಚಂಗೆ ಹೇಳ್ವೆ "ನೀ ಇಲ್ಲಿ ಬಂದ ಉದ್ದೇಶ ಈಗ ನಂಗೆ ಅರ್ತ ಆತ್. ನಿನ್ನ ಆಸೆ ಪೂರೈಸುವ ಸಮಯ ಬಂದುಟು. ದೇವಯಾನಿ ಮತ್ತು ನಂಗಾಗಿ ನಿನ್ನ ಬದ್ಕಿಸಿನೆಂತ ಹೇಳಿ 'ಸಂಜೀವಿನಿ' ವಿದ್ಯೆನ ಕಚಂಗೆ ಉಪದೇಸ ಮಾಡ್ವೆ. ನೀ ನನ್ನ ಹೊಟ್ಟೆ

ವೊಡ್ದ್ ಹೊರಗೆ ಬಾಕನ ನಾ ಸತ್ತ್ ಬಿದ್ದನೆ. ಆಗ ನಾ ಉಪದೇಶ ಮಾಡ್ದ 'ಸಂಜೀವಿನಿ' ವಿದ್ಯೆನ ಸಕ್ತಿಂದ ನನ್ನ ಜೀವ ಮಾಡಕು"ಂತ ಹೇಳ್ವೊ.

ಕಚ ಗುರುಗಳ ಕಾಲಿಗೆ ಮನ್ಸಿಲೇ ಅಡ್ಡಬಿದ್ದ್ 'ಸಂಜೀವಿನಿ' ವಿದ್ಯೆನ ಆಶೀರ್ವಾದ ತಕಂತ್. ಹಾಂಗೆ ಕಚ ಶುಕ್ರಾಚಾರ್ಯರ ಹೊಟೆಂದ ಬಿದ್ದ ಕೂಡ್ಲೆ, ಅಂವ 'ಸಂಜೀವಿನಿ' ವಿದ್ಯೆನ ಬಲಂದ ಗುರುಗಳ ಬದ್ಕಿಸಿತ್.

ಮತ್ತೂ ಹಲವು ವರ್ಸಗಳ ಕಾಲ ಕಚ ಗುರುಗಳ ಆಶ್ರಮಲಿ ಕಳ್ದ್ ಎಲ್ಲಾ ವಿದ್ಯೆಗಳ ಕಲ್ತ್ ಮನೆಗೆ ಹೊರ್ಡುವ ಸಮಯ ಬಾತ್. ಕಚ ಹೊರ್ಟ್ ನಿತ್ತ ಸಮಯ ದೇವಯಾನಿ ಹೇಳ್ದೆ, "ಓ, ಬ್ರಹಸ್ಪತಿಗಳ ಮಂಙ ಕಚ, ನೀ ನನ್ನ ಹೃದಯ ಗೆದ್ದೊಳ. ನಿನ್ನ ವಿದ್ಯೆ, ಗುಣ, ವ್ರತಪಾಲನೆ ನೋಡಿ ನಂಗೆ ಬಾರಿ ಕುಸಿ ಆತ್. ನಿನ್ನ ನಾ ಬಾರಿ ಪ್ರೀತಿ ಮಾಡ್ನೆ. ನನ್ನ ನೀ ಮೊದುವೆ ಆಗಿ ನನ್ನ ಆಸೆನ ಪೂರೈಸುಕುಂತ" ಬಾರಿ ವಿನಯಲಿ ಕೇಳ್ತ್ ದೇವಯಾನಿ.

---

**ಕುಂಙೆಟಿ ಶಿವರಾಮ ಗೌಡ (ವ್ಯಾಸ)**
8762121694




# ಗೌಜಿ ಗಮ್ಮತ್!




●

**ಹೊಳೆಕರೆ ಚೆಂಗಪ್ಪ**

ಚಿಟ್ಟೆ ಗೂಡೆಗೆ ಅವ್‌ಳ ಅಮ್ಮ ಮೊಸ್ರ್‌ಕೊಟ್ಟ್ ಮಜ್ಜಿಗೆ ಮಾಡಿ ಬೆಣ್ಣೆ ತೆಗಿಯಕೆ ಹೇಳ್ದೆ. ಚಿಟ್ಟೆಗೆ ಮಜ್ಜಿಗೆ ಕಡಿಯೊದ್ ಗೊತ್ತಿತ್ಲೆ. ಅಮ್ಮನ ಕೇಳಿಕೆ ನಾಚಿಕೆ!. ಅವ್ಳ್ ಮೊಸ್ರ್‌ನ ಒಂದ್ ಡಬ್ಬಿಲಿ ಹಾಕಂಡ್ ಅವ್‌ಳ ಸ್ನೇಹಿತೆ ಸುಮಿತ್ರೆನ ಕೇಳಿಕೆ ಅವ್‌ಳ ಮನೆಗೆ ಹೋದೆ. ಗದ್ದೆ ಏರಿ ಮೇಲೆ ನಡ್ಕಂಡೋಗಿ ತೋಡ್ ದಾಟಿ ಕಡ್ಪೆನ ಹತ್ತಿ ಇಳ್ದ್ ಸುಮಿತ್ರೆದ್ ಮನೆಗೆ ಮುಟ್ಟಿದೆ. ಅಲ್ಲಿ ಡಬ್ಬದ ಮುಚ್ಚಳ ತೆಗ್ದ್ ನೋಡ್ದೆ! ಮೊಸ್ರ್ ಮಜ್ಜಿಗೆ ಆಗಿ ಬೆಣ್ಣೆತೇಲ್ತಾ ಇದ್ದದೆ!

*****

ಅಂದ್ ಸೋಮಾರ, ಪ್ಯಾಲೇಸ್ ಗ್ರೌಂಡ್‌ಲಿ, ಜೀವನಲಿ ಮುಂದೆ ಬಂದ ಉದ್ಯಮಿಗಳ್ಗೆ ಸನ್ಮಾನ ಮಾಡುವ ಕಾರ್ಯಕ್ರಮ ಇದ್ದದೆ. ನಮ್ಮ ನೆರೆಮನೆ ಚೋಮುಣಿ ಆ ಉದ್ಯಮಿಗಲ್ಲಿ ಒಬ್ಬಾಂತ ಊರ್‌ಂದ ಭರತ ಫೋನ್ ಮಾಡಿ ಹೇಳಿತ್ತ್. ನಾನ್ ಅಲ್ಲಿಗೆ ಎತ್ತ್‌ಕನ ಕುರ್ಚಿಗೆಲ್ಲಾ ಭರ್ತಿಯಾಗಿ ನಿಲ್ಲಿಕೆ ಸತ ಜಾಗ ಇಲ್ಲದಂಗೆ ಜನಗ ತುಂಬಿದ್ದೊ. ನಾನ್ ಒಂದ್ ಬರೀಲಿ ನಿತ್ಕಂಡೆ. ನನ್ನ ಅದೃಷ್ಟಕ್ಕೆ ಅಲ್ಲಿಗೆ ಬರುವ ವಿಐಪಿಗೆಲ್ಲ ಕಾರ್‌ಂದ ಅಲ್ಲೇ ಇಳೀತಾ ಇದ್ದೊ.

ನನ್ನಗ್ಯಾನ ಸುಮಾರ್ ನಲ್ವತ್ ವರ್ಷಗಳ ಹಿಂದೆ ಹೋದೆ. ಅಂದ್ ಹೊತಾರೆ ನಾನ್ ಗೊಬ್ಬರ ಹೊತ್ಕಂಡ್ ಅಯ್ಯಪ್ಪ ದೇವ್ರ ಕೋಟೆಲಿದ್ದ ತೋಟಕ್ಕೆ ಹೋಗ್ತಾ ಇದ್ದೆ. ನಮ್ಮ ಚೋಮುಣಿದ್ ಮನೆ ಬೆಟ್ಟದ ಮೇಲೆ ಇತ್ತ್. ನನ್ನ ಕಂಡಂಗೆ ಚೋಮುಣಿ ಮನೆಗೆ ಕರ್ತ್. ಮೈಕೈ ಎಲ್ಲಾ ಬೆವ್ರಿತ್ತ್. ಆ ಕಡೆ ಈ ಕಡೆ ಎರ್ಡ್ ಚಕ್ರಗಳ ತರ ಕೆತ್ತಿದ ಕಲ್ಲ್‌ಗ, ಅದರ ಮದ್ಯ ಗುದ್ದಲಿ ಕಾವುನ ಸಿಕ್ಕಿಸಿ ಆಪು ಹಾಕಿ, ಮೇಲೆ ಎತ್ತುದು, ಕೆಳ್ಗೆ ಇಳ್ಸುದೂ

ಮಾಡ್ತಾ ಇತ್ತ್! ಜಗುಲಿಲಿ ಪಾಠ ಪುಸ್ತಕಗ ಚೋಮುಣಿಗೆ ಪಾರ ಕಾಯ್ತಾ ಇದ್ದೊ! ಸ್ವಾಮಿ ವಿವೇಕಾನಂದ ಹೇಳ್ದ "ಬಲಶಾಲೀ ವ್ಯಕ್ತಿತ್ವ" ಕಬ್ಬಿಣದ ಮಾಸಖಂಡ, ಉಕ್ಕಿನ ನರ, ಸಿಡ್ಲ್‌ನಂತ ಮನ್ಸ್‌ನ ಪಡಿಯುವ ಕಸರತ್ ಇದ್‌ತ ಚೋಮುಣಿ ನೆಗಾಡಿ ಕಂಡ್ ಹೇಳ್‌ದಂವ ರಟ್ಟೆನ ಮುಟ್ಟಿಕೆ ಹೇಳ್ತ್. ಹೌದು! ರಟ್ಟೆ ಕಲ್ಲ್ ತರ ಗಟ್ಟಿ ಇತ್ತ್. ಅಂಗ್ಯೆನ ಮುಂಡಿ ಮಾಡಿ ಅಮ್ಮುರಿಸಿ ಹಿಡ್ಕಾಂತ ಹೇಳ್ದೆ. ನರಗ ಮೇಲೆ ಎದ್ದ್, ಅವನ ರಟ್ಟೆ ನಮ್ಮ ಗೂಳಿ ಎತ್ ವಜ್ರನ ಭುಜತರ ಎದ್ದ್ ಕಾಣ್ತಾ ಇತ್ತ್. ಸಿಡ್ಲ್‌ನಂತ ಮನ್ಸ್‌ನ ನೋಡ್ದು ಹೆಂಗೆ?

ನನ್ನ ಮುಂದೆ ಒಂದ್ ಮರ್ಸಿಡಿಸ್ ಬೆನ್ಜ್ ಕಾರ್ ನಿಲ್ಲ್‌ಕನ ನಾನ್ ನಲ್ವತ್ ವರ್ಷ ಕೆಳಗೆಂದ ಒಂದೇ ಗಳಿಗೆಲಿ ಮೇಲೆ ಬಂದ್ ಬುಟ್ಟೆ! ಕಾರ್‌ಂದ ಇಳಿತ್ತಾ ಇದ್ದ ಚೋಮುಣಿದ್ ಅದೇ ಶೂರನತರ ಸರೀರ, ಬೆರ್ಳ್ ತೋರ್‍ಸಿರೆ ಕೈನ ನುಂಗಿ ಬುಡುವೆ ತೇಳುವ ಆತ್ಮವಿಶ್ವಾಸದ ನೋಡಾಟ! ಅಂವ ಆ ಮಟ್ಟಕ್ಕೆ ಏರ್‍ದ್ನ ನೋಡಿಕನ ಅಂವನೊಳಗೆ ಇರ್‍ವ ಸಿಡ್ಲ್‌ನಂತ ಮನ್ಸ್‌ನ ಪ್ರಭಾವ ನಂಗೆ ಆಗಲೇ ಗೊತ್ತಾದ್!

ಬಲಶಾಲೀ ವ್ಯಕ್ತಿತ್ವನ ಪ್ರತಿಯೊಬ್ಬ ಹೈದಂಗ, ಗೂಡೆಗ ಪಡ್ದಿರಕ್ಕೂಂತ ಬೇರೆ ಯಾರೋ ಹೇಳಿದ್ದಿದ್ದರೆ ಈ ಮಾತ್ ಪುಸ್ತಕದ ಬದ್ನೆ ಕಾಯಿ, ಗೈಪು ಮಾಡಿಕೆ ಆದ್‌ಲೇಂತ ಬಿಸಾಡಿ ಬುಡಕ್ಕಾಗಿತ್. ಯಾರ ಹೆಸ್ರ್ ಕೇಳಿಕನ ಮೈಲಿ ಮಿಂಚ್ ಬಂದದೆಯೋ! ಆ ವೀರ ನರೇಂದ್ರ! ಶ್ರೀ ರಾಮಕೃಷ್ಣ ಪರಮಹಂಸ, ಮಾತೆ ಶಾರದದೇವಿಯವರ ಶಿಷ್ಯ, ಸ್ವಾಮಿ ವಿವೇಕಾನಂದ ಅವರ ಬಾಯಿಂದ ಬಂದ ಮಾತ್‌ಇದ್. ಆ ಮಾತ್‌ಗೆ ಕಣ್ಣ್ ಮುಂದೆ ಇದ್ದ ಚೋಮುಣಿಯೇ ಸಾಕ್ಸಿ!

ಬಲಶಾಲೀ ವ್ಯಕ್ತಿತ್ವನ ಪಡಿಯಕೆ ಮಕ್ಕಳ ಹತ್ರಛಲ ಇದ್ದ್ ಅದರ್‍ನ ಪಡ್ದೇ ಪಡ್ದನೆತೇಳುವ ಆತ್ಮ ವಿಶ್ವಾಸ ಇರಕ್ಕೂಂತ ಸ್ವಾಮಿ ವಿವೇಕಾನಂದ ಹೇಳಿಯೋಳೊ! ಗಗನಕ್ಕೆ ಹಾರಿಕ್ಕಿಂತ ಮುಂದೆ ಜಗುಲಿಗೆ ಹಾರಿಕೆ ಕಲಿಯಕುತೇಳುವ ಗಾದೆ ಮಾತ್‌ತರ, ಮಕ್ಕ ಅವು ಇರುವ ಜಾಗ, ಇರುವ ಅನುಕೂಲಕ್ಕೆ ಸರಿಯಾಗಿ ಸಾಧನೆನ ಸುರು ಮಾಡಿಕಣಕ್ಕು. ಅದ್ಕೆ ಮಕ್ಕ ಹೊತ್ತಾರೆ ಬೇಗ ಏಳುವ ಅಭ್ಯಾಸನ ರೂಡಿ ಮಾಡಿಕಣಕ್ಕು, ಹೊತ್ತಾರೆ ಐದ್‌ಗಂಟೆಗೆ ಏಳುದೇ ಒಂದ್ ಸಾಧನೆ! ಏಕೆತೇಳಿರೆ ಈ ಸಮಯ ಬ್ರಾಹ್ಮಿಮುಹೂರ್ತಆಗಿದ್ದದೆ ಮತ್ತೆ ಈ ಸಮಯಲಿ ಮಾಡ್ದ ಎಲ್ಲಾ

ಸಂಕಲ್ಪಗ ಪೂರ್ಯೆಸುವೆ. ಮತ್ತೆಎದ್ದಮೇಲೆ ವ್ಯಾಯಾಮ ಮಾಡೊಕು. ವ್ಯಾಯಾಮನ ಕಲಿಯಕೆ ಬೇರೆ ಎಲ್ಲೊ ಹೋದು ಬೇಡ. ಸಾಲೆಲಿ ಪೀಟಿ ಮಾಸ್ಟ್‌ಕಲ್ಸುವಂತ ಪೀಟಿನ ಅರ್ಧಗಂಟೆ ಮನೆಲಿ ಅಭ್ಯಾಸ ಮಾಡಿರೆ ಸಾಕ್. ಪೀಟಿ ಮಾಡ್ರೆ ಸರೀರಕೆ ರೋಗನಿರೋಧಕ ಶಕ್ತಿ ಬಂದ್ ಸರೀರ ಗಟ್ಟಿಯಾದೆ ಮತ್ತೆ ಮನ್ಸ್‌ಗೆ ಏಕಾಗ್ರತೆ ಬಂದದೆ. ಹಂಗೆ ನೆನ್ನೆ ಮಾಡ್ದ ಪಾಠನ ಅರ್ಧ ಗಂಟೆ ಓದಿ, ಓದಿದ ಪಾಠನ ಒಂದ್ ಗಂಟೆ ಕುದ್ಕಂಡ್ ಗ್ಯಾನ ಮಾಡಿರೆ ಪಾಠದ ವಿಷಯಗ ತಲೆಲಿ ನಿಲ್ಲುದರ ಜೊತೆಗೆ ಪರೀಕ್ಷೆಲಿ ಲಾಯ್ಕ್‌ಮಾರ್ಕ್ ತಕಣಕ್. ಹಂಗೆ ಸ್ವಲ್ಪ ಸಮಯ ಮಾಡಿ ಕಂಡ್ ಮನೆ ಕೆಲ್ಸಗಳಿಗೆ ಅಪ್ಪ–ಅಮ್ಮಂಗೆ ಸಾಯ ಮಾಡಿರೆ ಮಕ್ಕಳಿಗೆ ತಿಳುವಳಿಕೆ, ಜಾಣ್ಮೆ ಬಂದದೆ. ಇದರೊಟ್ಟಿಗೆ ವಿದ್ಯೆಗೆ ವಿನಯಭೂಷಣತೇಳುವ ಮಾತ್‌ನ ಗ್ಯಾನ ಮಡ್ಕಂಡ್ ಮಕ್ಕ ವಿನಯವಂತರಾಗಿರಕು. ಪೀಟಿ, ಕಲಿಯದು, ಮನೆಕೆಲ್ಸ ಮತ್ತೆ ವಿನಯ ಇವ್ ಬಲಶಾಲೀ ವ್ಯಕ್ತಿತ್ವದ ನಾಲಕ್ ಸಾಹಸಗ.

ನಮ್ಮ ಸರೀರಕ್ಕೆ ಶುದ್ದವಾದ ಶಕ್ತಿ ಬಾದು ಆಕಾಸಲಿರುವ ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳ್‌ಂದ ಬರುವ ಕಿರಣಗಳ್‌ಂದ. ಈ ಶಕ್ತಿಗೆ ಕಾಸ್ಮಿಕ್ ಎನರ್ಜಿತ ಕರ್ದವೆ. ಬ್ರಹ್ಮಾಂಡದ ಗುರುತ್ವಾಕರ್ಷಣ ಬಲಂದ ಉತ್ಪತ್ತಿಯಾದ ಈ ಶಕ್ತಿ ಬ್ರಾಹ್ಮಿಮೂರ್ತದ ಸಮಯಲಿ ಭೂಮಿಗೆ ರಭಸಂದ ಬರ್ತಾ ಇದ್ದದೆ. ನಮ್ಮ ಸರೀರಲಿ ಇರ್ವ ಶಕ್ತಿಕೇಂದ್ರ ಕಾಸ್ಮಿಕ್ ಎನರ್ಜಿನ ಪಡ್ಕಂಡ್ ಚೈತನ್ಯಶಕ್ತಿಯಾಗಿ ಪರಿವರ್ತನೆ ಮಾಡ್ದೆ. ನಮ್ಮ ಸರೀರ ಮಿಲಿಯಗಟ್ಲೆ ಜೀವಕೋಶಗಳ್‌ಂದ ಆಗಿದ್ದದೆ. ಕಟ್ಟಡ ಇಟ್ಟಿಗೆಗಳ್‌ಂದ ಆಗುವಂಗೆ ನಮ್ಮ ಸರೀರ ಜೀವಕೋಶಗಳ್‌ಂದ ಆಗುಟ್ಟು. ಚೈತನ್ಯಶಕ್ತಿ ಸಿಮೆಂಟ್ ಇದ್ದಂಗೆ. ಇಟ್ಟಿಗೆಗಳ ಜೋಡಣೆನ ಸಿಮೆಂಟ್ ಬಲಪಡ್ಸುವತರ ಜೀವಕೋಶಗಳ ಜೋಡಣೆನ ಚೈತನ್ಯಶಕ್ತಿ ಬಲಪಡ್ಸಿ ಸರೀರನ ಗಟ್ಟಿಮುಟ್ಟಾಗಿ ಇರ್ವಂಗೆ ಮಾಡ್ದೆ. ಅದೇ ಚೈತನ್ಯಶಕ್ತಿ ಮೆದುಳುದ್ ಸಾಮರ್ಥ್ಯನ ಜಾಸ್ತಿ ಮಾಡಿ ಬುದ್ದಿಶಕ್ತಿನ ಜಾಸ್ತಿ ಮಾಡ್ದೆ. ನಾವು ತಿನ್ನುವ ಊಟ ಕುಡಿಯುವ ನೀರು ಸರೀರಕ್ಕೆ ಶಕ್ತಿ ಕೊಡುವಲ್ಲಿ ಮುಖ್ಯ ಪಾತ್ರ ವಹಿಸುವೆ. ನಾವು ತಿಂದ ಊಟರಸ, ರಕ್ತ, ಮಾಸ, ಚರ್ಬಿ, ಮೂಳೆ, ಲೋಳಿ, ಜುವದ್ರವ ಈ ಏಳ್ ಧಾತುಗ ಆಗಿ ಪರಿವರ್ತನೆ ಆದೆ. ನಮ್ಮ ಸರೀರಲಿ ಇರ್ವ ಶಕ್ತಿಕೇಂದ್ರ ಜುವದ್ರವನ ಚೈತನ್ಯಶಕ್ತಿಯಾಗಿ ಪರಿವರ್ತನೆ ಮಾಡ್ದೆ. ಬ್ರಾಹ್ಮಿಮೂರ್ತಲಿ ವ್ಯಾಯಾಮ ಮಾಡ್ರೆ ಚೈತನ್ಯದ ಚಿಲುಮೆ ಚಿಮ್ಮಿ ಸರೀರಲಿ ಸಂಚಲನ

ಉಂಟಾದೆ, ಮನ್ಸ್‌ಗೆ ಉಲ್ಲಾಸ ಸಿಕ್ಕಿದೆ. ಮಕ್ಕ ಬ್ರಾಹ್ಮಿಮೂರ್ತನ ಸದುಪಯೋಗ ಮಾಡಿಕಂಡ್ರೆ ಅವ್ಕೆ ಆರೋಗ್ಯ, ಐಶ್ವರ್ಯ, ವಿದ್ಯೆ, ಬುದ್ಧಿ, ಉದ್ಯೋಗ, ಅದೃಷ್ಟ ಎಲ್ಲಾ ಕೂಡಿ ಬಂದದೆ.

ನಾವು ಮಾಡುವ ಪ್ರತಿಯೊಂದ್ ಕೆಲ್ಸನ ಸರಿಯಾದ ಸಮಯಲಿ ಧೈರ್ಯಂದ, ಉತ್ಸಾಹಂದ ಸುರುಮಾಡೊಕು. ಕೆಲ್ಸದ ಮೇಲೆ ಶ್ರದ್ಧೆ ಮಡ್ಗಿ, ಪ್ರಯತ್ನ ಹಾಕಿರೆ, ಗೆಲುವು ಸಿಕ್ಕುದು ಖಂಡಿತ! ಒಂದ್ ಕೆಲ್ಸಕ್ಕೆ ಕೈ ಹಾಕಿದ ಮೇಲೆ ಎಷ್ಟೇ ಕಷ್ಟ ಬಂದರೂ ಆ ಕೆಲ್ಸನ ಅರ್ದಕ್ಕೆ ನಿಲ್ಸಕಾಗದ್. ಪುರಾಣ ಕಾಲಲಿ ದೇವತೆಗಳ ಗುರು ಬ್ರಹಸ್ಪತಿದ್ ಮಂಙ ಕಚ ಸತ್ತವರ್ನ ಬದ್ಕುಸುವ ಮೃತಸಂಜೀವಿನಿ ವಿದ್ಯೆ ಕಲಿಯಕೆ ಶುಕ್ರಾಚಾರ್ಯರ ಹತ್ರ ಹೋಗಿದ್ದದೆ. ಶುಕ್ರಾಚಾರ್ಯ ರಾಕ್ಷಸರ ಗುರು. ಶುಕ್ರಾಚಾರ್ಯ ಮೃತಸಂಜೀವಿನಿ ವಿದ್ಯೆನ ಕಚಂಗೆ ಕಲ್ಸಿದೆ. ಕಚ ಆ ವಿದ್ಯೆನ ಕಲ್ತ್‌ಕಂಡಿರ್ಕನ ರಾಕ್ಷಸ ಮಕ್ಕ ಕಚಂಗೆ ದಿನೋಳು ತೊಂದರೆ ಕೊಡ್ತಾಯಿದ್ದವೆ. ಒಂದ್ ಸಲ ಕಚನ ಕೊಂದೂ ಬುಟ್ಟವೆ! ಆಗ ಶುಕ್ರಾಚಾರ್ಯ ಮೃತಸಂಜೀವಿನಿ ವಿದ್ಯೆಂದ ಅವನ ಬದ್ಕಿಸಿದೆ. ರಾಕ್ಷಸ ಮಕ್ಕ ಎಷ್ಟೇ ಕಷ್ಟ ಕೊಟ್ಟರೂ, ಕಡೆಗೂ ಕಚ ವಿದ್ಯೆನ ಕಲ್ತ್‌ಕಂಡೇ ವಾಪಾಸ್ ದೇವಲೋಕಕ್ಕೆ ಹೋದೆ.

*****

ಮಕ್ಕ ವ್ಯಕ್ತಿತ್ವನ ಬಲಪಡ್ಸುವ ಸಂಕಲ್ಪ ಮಾಡಿ, ಬ್ರಾಹ್ಮಿಮೂರ್ತಲಿ ಎದ್ದ್ ಚೈತನ್ಯ ಶಕ್ತಿನ ಪಡ್ಕಂಡ್, ಶ್ರಮಪಟ್ಟರೆ, ಚಿಟ್ಟೆದ್ ಮಸ್ರ್ ಮಜ್ಜಿಗೆಯಾಗಿ ಬೆಣ್ಣೆ ಬಂದಂಗೆ, ನಮ್ಮ ಸುತ್ತಮುತ್ತ ಇರುವ ದೈವಶಕ್ತಿ ಬಲಶಾಲೀ ವ್ಯಕ್ತಿತ್ವನ ದಯಪಾಲ್ಸುದಂತೂ ಖಂಡಿತ! ಮಜ್ಜಿಗೆ ಕಡ್ದ್ ಬೆಣ್ಣೆ ತೆಗಿಯಕೆ ಗೊತ್ಲೆ ತೇಳಿ ಚಿಟ್ಟೆ ಸುಮ್ಮನೆ ಕುದ್ದತ್ಲೆ. ಅವ್ಳು ಮಜ್ಜಿಗೆ ಕಡ್ದ್ ಬೆಣ್ಣೆ ತೆಗಿಯುವ ಸಂಕಲ್ಪ ಮಾಡ್ದೆ. ಮಸ್ರ್‌ನ ಡಬ್ಬಿಗೆ ಹಾಕಂಡ್ ತನ್ನ ಸ್ನೇಹಿತೆ ಮನೆಗೆ ಹೋದೆ. ಅವ್ಳ್ ಪಟ್ಟ ಶ್ರಮ ಅವ್ಳ ಸಂಕಲ್ಪನ ಪೂರೈಸಿತ್. ಹೆಂಗೆ ಹದ್ದ್‌ಗ ಸಲ್ಪ ದೂರ ರೆಕ್ಕೆ ಬಡ್ಕಂಡೋಗಿ ಆಕಾಸಲಿ ಆರಾಮಾಗಿ ಹಾರಾಡ್ತಿದ್ದವೆಯೋ ಹಂಗೆ ಮಕ್ಕ ಓದುವ ವಯ್ಸ್‌ಲಿ ಇಷ್ಟಪಟ್ಟ್ ಬಲಶಾಲೀ ವ್ಯಕ್ತಿತ್ವನ ಪಡ್ಕಂಡ್ ಬುಟ್ಟರೆ ಅವರ ಮುಂದೆದ್ ಬದ್ಕ್ ಎಲ್ಲಾ ಗೌಜಿ ಗಮ್ಮತ್ತೇ!

---

**ಹೊಳೆಕರೆ ಚೆಂಗಪ್ಪ**
ಬೆಂಗಳೂರು ಮೊಬೈಲ್ : 9945791209




# ಹಳ್ಳಿ ಹೈದನ ಬ್ಯಾಟೆಗ

## ಒಂದು ಹಾಸ್ಯ ಕಥೆ

**ಕಾವೇರಿಮನೆ ಡಾ. ಬೋಜಪ್ಪ**

ಬ್ಯಾಟೆಲಿ ಮೂರು ತರ. ಕಾಡ್‌ಪ್ರಾಣಿ – ಪಕ್ಷಿಗಳ ಬ್ಯಾಟೆ, ಮೀನ್ ಬ್ಯಾಟೆ ಮತ್ತೆ ಜೇನ್ ಬ್ಯಾಟೆಂತ ಹೇಳಕ್. ಕೊಡಗಿನವ್ಕೆಲ್ಲಾ ಇದ್ ಲಾಯ್ಕ ಗೊತ್ತುಟ್ಟಲ್ಲಾ?

ನಾನ್ ಭಾಗಮಂಡ್ಲನಾಡ್‌ನ ಸಂಣ ಪುಲಿಕೋಟ್ ಗ್ರಾಮಲಿ ಹುಟ್ಟಿದ (1930) ಕಾವೇರಿ ಮನೆ ಬೋಜಪ್ಪ (ಇಂದಿಗೆ ಡಾ. ಬೋಜಪ್ಪ ಅಂತ ನನ್ನ ಜನ ಕರ್ದವೆ). ಓ ಇವು ಡಾಕ್ಟರ್‌ಂತ ಹೇಳಿ ಹೊಟ್ಟೆಬೇನೆನೋ ಕಾಲ್‌ಬೇನೆನೋ ಬಂದರೆ ನನ್ನ ಹತ್ರ ಇಂಜಕ್ಷನ್‌ಗೆ ಓಡಿಬರಬೇಡಿ. ನಂಗೆ ಸಿರಿಂಜ್ ಹಿಡಿಯಕ್ಕೇ ಗೊತ್ಲೆ. ಯಾಕೆಂತ ಗೊತ್ತಾ? ನಾನ್ ಗಿಡ–ಮರಗಳ ಡಾಕ್ಟರ್. ಅವ್ಕೆ ರೋಗ ಬಂದ್ರೆ ಇಂಜೆಕ್ಷನ್ ಕೊಟ್ಟನೆ. ಆಮೇಲೆ ಆ ರೋಗ ಸತ್ತದೋ ಅಲ್ಲಿ ಮರನೇ ಸತ್ತದೊ ಅದ್ ಬೇರೆ ಸಂಗ್ತಿ ಬುಡಿ.

ನಾನ್ ಹುಟ್ಟಿದ ಊರ್‍ನ ಸುತ್ತ್–ಮುತ್ತ್ ತುಂಬಾ ಕಾಡ್ ಆಗ ಇತ್ತ್. ಕಾಡೆಂದ್ರೆ ಕುರ್‌ಚಲ್ ಕಾಡಲ್ಲ. ದೊಡ್ಡ–ದೊಡ್ಡ ಆಕಾಶಕ್ಕೇ ಮುಟ್ಟುವಾಂಗೆ ಬೆಳ್ದ್ ನಿಂತ ಮರಗಳ ಕಾಡ್ ಗೊತ್ತಾತಾ? ಇಂಥಾ ಕಾಡ್ಲಿ ಬೇಟೆಗೆ

ಹೇಳೊಕಾ? ಎಂತೆಂತ ಪ್ರಾಣಿ-ಪಕ್ಷಿಗ! ನಿಮ್ಗೆ ಗೊತ್ತುಟ್ಟು ಅಲ್ಲಾ? ನಾನ್ ಹೈಸ್ಕೂಲ್‌ನ ಹೈದ ಆಗಿರ್‌ಕನ ನಮ್ಮ ಮನೆಲಿ ನನ್ನ ದೊಡ್ಡಪ್ಪನ ಮಂಜ ಬೋಪಯಂತ ಅಂಣ ಇದ್ದೊ. ಅವು ಒಳ್ಳೆ ಗುರಿಗಾರ್. ನಂಗೆ ಏಕೋ ಬ್ಯಾಟೆನ ಹುಚ್ಚು. ಒಮ್ಮೊಮ್ಮೆ ಅವರೊಟ್ಟಿಗೆ ಕಾಡಿಗೆ ಬ್ಯಾಟೆಗೆ ಹೋಗ್‌ತಿದ್ದೆ. ಹಂಗೇ ಅದರ ಹುಚ್ಚು ನಂಗೆ ಹಿಡ್ಕಂಡಿತ್ತ್.

ಒಂದ್ ದಿನ ಕುದ್ದ್‌ಕಂಡ್ ಯೋಚನೆ ಮಾಡ್‌ತಾ ಇದ್ದೆ. ಏನೆಂದ್ರೆ, ಎಷ್ಟ್ ದಿನಂತೇಳಿ ಅವರ ಜೊತೆಲಿ ನಾನ್ ಹೋದು. ಬೇಟೆ ಆದರೆ ನಂಗೆ ಅವು ಮಾಂಸನೂ ಕೊಡ್‌ದ್ಲೆ. ಹಿಂಗೆ ನಾನೇ ಬೇಟೆಗೆ ಹೋಕುಂತ ಮನಸ್ ಮಾಡ್ದೆ. ಮುಂದೆ ಏನಾಕ್ ಕೇಳಿ. ಮಳೆಗಾಲ ಕಮ್ಮಿಯಾದ ಕಾಲ, ಕೊಡಗ್‌ನ ಕಾಡ್ಲಿ ಬೇಕಾದಷ್ಟ್ ಹಲಸಿನ ಹಣ್ಣ್. ಆಗ ದನಗ ರಾತ್ರೆ ಹಟ್ಟಿಗೇ ಬಾರದೆ ಹಣ್ಣ್ ತಿಂದ್ ತಿಂದ್ ಮರದಡಿಲೇ ಮಲ್ಗಿಕೊಂಡ್ ಬುಡ್ತಿದ್ದೊ. ನನ್ನ ಅಪ್ಪ ಸುಮಾರ್ 50 ನಡೆಗಳಷ್ಟ್ ದನಗಳ ಸಾಕಿದ್ದ ಕಾಲ. ಹಂಗಾಗಿ ಒಂದಲ್ಲ – ಒಂದು ದಿನ ದನಗಳ ಈ ಚಟ ಇದ್ದೇ ಇರ್‌ತ್ತಿತ್ತ್. ಒಮ್ಮೆ ಒಂದು ಒಳ್ಳೆ ಕರ್ (ಅದರ ಹೆಸ್ರ್ ಕೆಂಪಿಂತ) ಹಟ್ಟಿಗೆ ಬಾತ್ಲೆ. ಹುಡ್ಕಿಕೆ ಸುರು ಮಾಡ್‌ತ ಅಪ್ಪ ಹೇಳ್ದೊ. ಇದೇ ಒಳ್ಳೆ ಚಾನ್ಸ್‌ಂತ ತಿಳ್ಕಂಡ್ ಬೇಟೆನೂ ಆದ್ರೆ ಕುಸಿ ಆದೆಂತೇಳಿ ಅಪ್ಪನ ಕೋವಿನ ಕೇಳ್ದೆ. ಅವು ಏನೂ ಮಾತಾಡದೆ ಕೊಟ್ಟು ಬುಟ್ಟೊ. ನನ್ನ ಕುಸಿ ಹೇಳೊಕೆ ನಿಮ್ಗೆ? ಆ ಕೋವಿ ಒಂದು ಕೊಳವೆನ ಕೇಪಿನ ಕೋವಿ. ಅದ್ ಅಪ್ಪ-ಅಪ್ಪನ ಕಾಲದ್ದೆ. ಆಗಲೇ ತುಕ್ಕ್ ಹಿಡ್ದ್ ಹೋಗಿತ್ತ್ (ಅದ್ಕೆ ಮಸಲ್ ಲೋಡಿಂಗ್ ಕೋವಿಂತ ಹೆಸರ್). ಅಂದ್ರೆ, ಕೋವಿ ಮದ್ದ್ ಮತ್ತೆ ಚಿಲ್ಲ್ ಕೊಳವೆಗೆ ತುಂಬಿದಿ, ಮೇಲೆಂದ ಒಂದು ಬಟ್ಟೆ ಚೂರು ಹಾಕಿ ಒಂದು ಗಟ್ಟಿಯಾದ ಕೋಲ್‌ಂದ ರಟ್ಟೆ ಶಕ್ತಿ ಎಲ್ಲಾ ಉಪಯೋಗಿಸಿ ಕಂಡ್ ಜಡ್ದೆ. ಆಮೇಲೆ ಕೇಪ್ ಇಡ್‌ವಲ್ಲಿ 1 ಕೇಪ್ ಇಸಿದೆ. ಈಗ ನಿಮ್ಮ ಕೋವಿ ಗುಂಡು ಹೊಡಿಯಕೆ ರೆಡಿ. ಈ ಕೆಲ್ಸ ಮುಗ್ಸಿ ತಮ್ಮನ ಕರ್‌ಕಂಡ್ (ತಮ್ಮಂಗೆ ಗುಂಡು ಹೊಡೆಕೇನ್ ಗೊತ್ತಿತ್ತ್‌ಲೆ. ಅಂವ ನನಗೊಬ್ಬ ಪಾಸಾಡಿ ಅಷ್ಟೆ) ಹೊರಟೇ ಬುಟ್ಟೆ ಕರ್‌ನ ಹುಡ್ಕಿಕೆ. (ಇದೆಲ್ಲಾ ಕೊಡಗಿನ ವಯಸ್ಕರಿಗೆ ಗೊತ್ತೇ ಉಟ್ಟು. ಆದ್ರೆ, ಇಂದ್‌ನ ನಮ್ಮ ಮಕ್ಕಳಿಗೆ ಮಸಲ್ ಲೋಡಿಂಗ್ ಕೋವಿ ಎಂದ್ರೆ ಅದರ ವಾಸನೇ ಇಲ್ಲೆ. ಸರಿನಾ? ಅವುಕಾಗಿ ಬರ್ದನೆ ಅಷ್ಟೆ.)

ಕಾಡ್ ನುಗ್ಗಿ ಎಲ್ಲಾ ಹಲ್ಸ್‌ನ ಮರಗಳ ಅಡಿಪಿ ಕರ್‌ನ ಹುಡ್ಕಿರೆ

ಸಿಕ್ಕದೆ. ಕಡೆಗೆ 1 ಮರದಡಿಲಿ ಯಾವುದೋ ಪ್ರಾಣಿದ 2 ಕೆಂಪು ಕಣ್ಣ್‌ಗಳ್ ಲೈಟ್ ಬುಡ್‌ಕಾಕನ ಕಂಡೆ. ಇದ್ ಕರ್‌ನ ಕಣ್ಣ್ ಅಲ್ಲ. ಅದ್ ಇಷ್ಟೊತ್ತಿಗೆ ಮಲಗಿ ಕಂಡಿದ್ದದ್ರೆ, ಈ ಕಣ್ಣ್‌ಗ ಸ್ವಲ್ಪ ಎತ್ತರ್ಲಿ ಕಾಂಬಕನ ಇದ್ ಖಂಡಿತ ಕಡ್ವದೇ ಆಗಿರಕುಂತೇಳಿ ಗುಂಡು ಹಾರಿಸೇ ಬುಟ್ಟೆ. ದಡ – ದಡಂತ ಆ ಕಡೆ ಏನೋ ಬಿದ್ದಾಂಗೆ ಸದ್ದ್ ಕೇಳ್ತ್. ಈ ಕಡೆ ಈ ಸುಟ್ಟ ಕೋವಿನ ಕುಂಡೆ (ಅದರ ಹಿಂದಿನ ಅಗಲದ ಮರದ ಭಾಗ) ನನ್ನ ಎದೆಗೆ ಒದ್ದೆ ಬುಟ್ಟ್ ನಾನ್ ಹಿಂದೆ ಕಡೆ ಬಿದ್ದೇ ಬಿಟ್ಟೆ. ಹೆಂಗೊ ಎದ್ದ್ ಮರದ ಕಡೆಗೆ ಓಡ್ದೊ. ಹೋಗಿ ನೋಡ್ರೆ ಅದ್ ಕಡ್ವೆನೂ ಅಲ್ಲ ಗಿಡ್ವೆನೂ ಅಲ್ಲ. ನಮ್ಮ ಪಾಪದ ಕೆಂಪಿ ಕರ್ ಸತ್ತ್ ಬಿದ್ದಿತ್ತ್. ಅಯ್ಯೋ ರಾಮ – ರಾಮಂತ ತಲೆ ಬಡ್‌ಕಂಡೊ. ಆದ್ರೆ ಏನ್ ಫಲ? ಏನ್ ಮಾಡ್ದು ಈಗೆಂತ ತಿಳಿಯದೆ, ಮೆಲ್ಲಗೆ ಮನೆಗೆ ಬಂದ್ ಕೋಂಬರೆ ಸೇರಿಕಂಡೊ. (ಸದ್ಯ ಅಪ್ಪ ಒಳಗಿಂದ ಬಾಗಿಲ್ ಬೋಲ್ಟ್ ಹಾಕಿತ್ತ್‌ಲೆ). ಇನ್ನ್ ಕೇಳೊಕೊ ನನ್ನ ಪಾಡ್. ರಾತ್ರೆಲ್ಲಾ ನಿದ್ದೇ ಬಾತ್ಲೆ. ಹೆಂಗೂ ಬೆಳಗಾಕನ ಎದ್ದ್ ಅಪ್ಪನ ಕಣ್ಣಿಗೆ ಬೀಳದೆ ಅಲ್ಲಿ – ಇಲ್ಲಿ ತಪ್ಪಿಸಿ ಕಂಬಕ್ಕೆ ನೋಡ್ರೆ ಒಮ್ಮೆ ಅಪ್ಪ ಎದ್‌ರ್‌ಗೆ ಸಿಕ್ಕಿ ಬುಟ್ಟೊ. ಏನಾತ್ ನಿಮ್ಮ ಬೇಟೆ? ಕರ್ ಸಿಕ್ಕ್‌ತಾಂತ ಕೇಳ್‌ಕನ ಬಾಯೇ ಬಾದ್ಲೆ. ಬದಲ್, ಉಚ್ಚೆ ಬಂದೋತ್. ಹೆಂಗೋ ಉಚ್ಚೆ ಕಟ್ಟಿಕಂಡ್ ನಡ್ದ ಸಂಗತಿನೆಲ್ಲಾ ಹೆದ್ರಿಕಂಡ್ – ಹೆದ್ರಿಕಂಡ್ ಹೇಳ್ದೆ. ಅಪ್ಪನ ಸಿಟ್ಟ್ ಎಲ್ಲಿತ್ತೊ? ನಿನ್ನ ಕಣ್ಣೇ ತಪ್ಪ್ ಮಾಡ್ದ್ಂತೇಳಿ ಕಣ್ಣಿಗೇ 1 ಬಾರಿಸಿದೊ. ಅಂದ್ ಲೂನ, ಕಣ್ಣ್ ಇಂದ್‌ಗೂ ಸರಿ ಆತ್ಲೆ. ಹೆಂಗೋ ಒಂದೂವರೆ ಕಣ್ಣ್‌ಲೇ ಓದಿ – ಓದಿ ಮುಂದೆ ಪಿಎಚ್.ಡಿ. ಸಮೇತ ಮುಗ್ಸಿಬುಟ್ಟೆ. ನನ್ನ ಸಾಹಸ ಹೆಂಗುಟ್ಟು ನೋಡಿ? ಅತ್ತ ಕೋವಿ ಮುರ್ದ್ ಬೀತ್, ಇತ್ತ ನನ್ನ ಕಣ್ಣೊಂದು ಅರ್ದ ಆತ್. ಅಲ್ಲಿಗೆ ನನ್ನ ಕಾಡ್‌ಬೇಟೆನ ಸಮಾದಿ ಆತ್.

ಹಂಗೇನೇ ಸುಮಾರ್ ದಿನ ಅಪ್ಪನ ಕಣ್ಣ್ ತಪ್ಪಿಸಿಕಂಡೇ ಬದುಕಿದೆ. ಇನ್ನ್ ಏನ್ ಮಾಡ್ದುಂತ ಗ್ಯೇನ ಮಾಡ್ಕೆ ಸುರುಮಾಡ್ದೆ. ಆಗ ನಂಗೆ ಕಂಡದ್ದೇ ಮೀನ್ ಬೇಟೆ. ನಮ್ಮ ಮನೆ ಹತ್ರ ಅಂದ್ ಒಂದ್ ದೊಡ್ಡ ಹೊಳೆ ಇತ್ತ್. ಅಲ್ಲಿ ದೊಡ್ಡ – ದೊಡ್ಡ ಮೀನ್‌ಗ ನಂಗೆ ಗೊತ್ತಿತ್. ಈಗ ಮೀನ್ ಬೇಟೆನ ಹುಚ್ಚ್ ಹಿಡ್ತ್ ನಂಗೆ.

ನನ್ನ ಜೊತೆಲಿ 5–6 ಹೈದಂಗ – ಗೂಡೆಗ ಇದ್ದೊ. ಅವರ್‌ನೆಲ್ಲಾ ಒಂದು ದಿನ ಕೂರ್‌ಸಿಕಂಡ್ ಅವರ ತಲೆಗೂ ಮೀನ್‌ಬೇಟೆನ ಹುಚ್ಚ್ ಹಿಡ್ಸಿದೆ.

ಮೀನ್ ಬೇಟೆಲಿ 3–4 ತರ. ಅದರ್ಲಿ ಹೊಳೆಲಿ ಎಲ್ಲೆಲ್ಲಿ ದೊಡ್ಡ ದೊಡ್ಡ ಗಂಡಿಗ ಒಳೊ ಅಲ್ಲಿ ಮೀನ್‌ಗ ಇದ್ದವೆ. ಅಲ್ಲಿಗೆ ವಿಷ ಹಾಕಿ ಮೀನ್ ಸಾಯಕ್ಕಾಕನ ಹಿಡ್ಕಂಬದು ಒಂದು ತರ. 2ನೆದಾಗಿ ಅಂಥ ಗುಂಡಿಗಳಿಗೆ ಬಲೆ ಬೀಸಿ ಮೀನ್ ಹಿಡ್ಕೊಂಬದು. 3ನೆದಾಗಿ ಮಳೆಗಾಳಲಿ ತೋಡ್‌ಗಳ್ಲಿ ನೀರ್ ರಭಸಂದ ಹರ್ದ್ ಬರ್ವ ಕಡೆ ನೀರ್ ಹರಿಕೆಯೆ ಒಂದೇ ಒಂದ್ ಜಾಗ ಕಂಡಿಬುಟ್ಟ್ (ನೀರ್–ಮೀನ್ ಹೋಕೆದಾರಿ) ಬೇರೆ ಕಡೆಲೆಲ್ಲಾ ಮುಚ್ಚಿ ಆ ಕಂಡಿನ ಬಾಯಿಗೆ ಎದ್ರಾಗಿ ಕೂಳಿ (ಮೀನ್ ಹಿಡಿವ ವಾಟೆ/ಬೆತ್ತಂದ ಮಾಡ್ದ ಸಾಧನ) ಇಸುದು. ಇಂದ್ ಇಡೀ ರಾತ್ರೆ ಬುಟ್ಟ್ ಬೆಳಗಾಕ ಕೂಳಿ ತೆಗೆದ್ ನೋಡ್ರೆ ಅದರ್ಲಿ ಮೀನ್‌ಗ ಸಿಕ್ಕಾಕಿ ಕಂಡಿದ್ದವೆ. ಇದರ್ಲಿ ವಿಶೇಷ ಏನಂದ್ರೆ ಒಂದು ಸರ್ತಿ ಮೀನ್‌ಗ ಕೂಳಿ ಒಳಗೆ ಹೋದರೆ ಮತ್ತೆ ಅವ್ಕೆ ಹೊರಗೆ ಬಾಕಾದ್‌ಲೆ. 4ನೆ ತರ ಅಂದ್ರೆ, ಬತ್ತದ ಬೆಳೆ ಹಣ್ಣಾಕೆ ಗದ್ದೆಂದ ನೀರ್ ಬುಟ್ಟ್ ಬೆಳೆ ಬೇಗ ಹಣ್ಣಾಕೆ ಮಾಡ್ವ ಕೊಡಗ್‌ನ ಪದ್ಧತಿ. ಗದ್ದೆ ನೀರ್ ಹೊರ್ಗೆ ಹೋಕೆ ಪುಣಿಲಿ ಒಂದೇ ಒಂದು ಕಂಡಿ ಬುಟ್ಟ್ ಕಂಡಿಗೆ ಅಡ್ಡಕ್ಕೆ ಗೋರಿ ಹಾಕುದು. ನೀರ್‌ನೊಟ್ಟಿಗೆ ಮೀನ್ (ಹೆಚ್ಚಾಗಿ ಕೊಯ್ಲೆ ಮೀನ್) ಹೋಗಿ ಗೋರಿಲಿ ಇದ್ದದೆ. ಆಗಾಗ ಗೋರಿನ ಎತ್ತಿ ನೋಡಿ ಕಂಡ್ ಮೀನ್‌ನ ಸುರ್ಕಮ್ಮಕು. ಕೊಯ್ಲೆ ಮೀನ್ ಸಿಕ್ಕಿ ಬುಟ್ಟರೆ ರೊಟ್ಟಿ ಮಾಡಿ ತಿಂದರೆ ಅದರ ರುಚಿ ನಿಂಮ್ಗೆ ಗೊತ್ತುಟಲ? ನಾನ್ 15 ವರ್ಷದ ಹೈದ ಆಗಿರ್ಕನ ಒಮ್ಮೆಮ್ಮೆ 5–6 ರೊಟ್ಟಿ ಹೊಡಿತಿದ್ದೆ.

ಈ ನಾಲ್ಕು ತರದ ಮೀನ್ ಬೇಟೆಲಿ 1ನೇದ್ ಸರ್ಕಾರದ ಕಾನೂನ್‌ಗೆ ವಿರಾದೊವಾದದ್ದ್. ಅಪಾಧಿಕರ್ ಸಿಕ್ಕಿಬಿದ್ದರೆ ಅಂಥವ್ಕೆ ಕತ್ತಲೆ ಕೋಣೇ ಗತಿ. ಹಂಗಾದರೂ ನಮ್ಮ ಜನಕೆ ಮೀನ್‌ನ ಆಸೆ ಮುಂದೆ ಇದೇನ್ ಮಹಾಂತ ಹೇಳಿಕಂಡ್ ಹೊಳೆಗೆ ಕಟ್ಟೆ ಹಾಕುದು (ಮದ್ದ್ ಹಾಕುದು) ಹಿಂದೆನ ಕಾಲಲಿ ನಡೆದೇ ನಡಿತ್ತಿತ್ತ್. ಮೀನ್ ಹಿಡ್ದ್ ಮನೆಗೆ ಹೊತ್ತ್‌ಕಂಡ್ ಬಾಕನ ಜನರ ಕುಸಿ ಮತ್ತೆ ಅವರ ಮಜ ನೀವ್ ನೋಡೊಕು. ಹೊಳೆಗೆ ಕಟ್ಟ್ ಹಾಕಿ ಮೀನ್ ಹಿಡ್‌ದು ಕೊಡ್ಗ್‌ನ ಹಳಬರಿಗೆ ಗೊತ್ತೇ ಉಟ್ಟು. ಆದ್ರೆ ಇದ್ ಏನ್? ಎಂತ ವಿಷಂತ ಅದರ ವಾಸನೇ ನಮ್ಮ ಇಂದ್‌ನ ಮಕ್ಕಳಿಗೆ ಗೊತ್ತುಟ್ಟಾ? ಅದ್ ಏನ್‌ಂತ ಹೇಳಕು ಅಲ್ಲಾ?

ಕೊಡ್ಗ್‌ನ ಕಾಡ್‌ಗಳ್ಲಿ 'ಚಿಮರಿ ಬಳ್ಳಿಂತ ವಿಷಕಾರಿ ದೊಡ್ಡ ಬಳ್ಳಿಗ ಹಬ್ಬಿಕೊಂಡಿದ್ದವೆ. ಅದರ್ನ ಕಡ್‌ಕಂಡ್ ಬಂದ್ ಕೊಪ್ಪೆ ತೆಗ್ದ್ ಅದರೊಟ್ಟಿಗೆ

ಬೂದಿ ಸೇರ್ಸಿ ಲಾಯಕ ವಣ್ಕೆಲಿ ಕುಟ್ಟಿ ಮಿಶ್ರ ಮಾಡ್ರೆ ನಿಮ್ಮ ಹೊಳೆನ 'ಕಟ್ಟ್ ಮದ್ದ್' ರೆಡಿ. ಇದೆಲ್ಲಾ ನಂಗೆ ಗೊತ್ತಿತ್. ಯಾಕೆಂದ್ರೆ, ಮನೆಲಿ ದೊಡ್ಡವು ಮಾಡ್‌ದರ್ನ ನಾನ್ ನೋಡಿ ಕಲ್ತ್‌ಕುಂಡಿದ್ದೆ.

ಒಂದ್ ದಿನ ನಾವೆಲ್ಲಾ ಸೇರಿ ಇದರ ದಡೆಗಳ್ನ (ದಪ್ಪನಾಗಿ ಬೆಳ್ದ ಬಳ್ಳಿಗೆ ದಡೆಂತ ಹೆಸ್‌ರ್) ಕಡ್‌ಕಂಡ್ ಬಂದ್ ನಾನು ಈ ಮುಂದೆ ಬರ್ದಂಗೆ ರೆಡಿ ಮಾಡಿ ಎಲ್ಲವೂ ಒಂದೊಂದು ಗೋರಿಲಿ ಈ ವಿಷಮದ್ದ್‌ನ ತುಂಬ್ಸಿ ಕಂಡ್ ಯಾರಿಗೂ ಗೊತ್ತಿಲ್ಲದಾಂಗೆ ಹೊಳೆಕರೆಗೆ ಹೋಗಿ ತುಂಬ ಮೀನ್ ಇರ್ವ ಗುಂಡಿಗೆ ಇಳ್ದ್ ಸಾಲಾಗಿ ನಿತ್ತ್, ಗೋರಿನ ನೀರ್‌ಲಿ ಅರ್ಧ ಮುಳ್ಗ್‌ಸಿ ಚಳ – ಪಳ ಮಾಡ್ಕನ ವಿಷದ ಹೊಡಿ ನೀರ್‌ಗೆ ಸೇರಿ ಆ ವಿಷದ ನೀರ್ನ್ ಮೀನ್‌ಗ ಕುಡೆಕಾಕನ ತಲೆತಿರ್ಗಿ – ಉಸಿರ್ ಕಟ್ಟಿಕಂಡ್ ಮೀನ್‌ಗ ಪಟ – ಪಟಂತ ಮೇಲಕ್ಕೆ ಹಾರಿ ಹಾರಿ ಬಿದ್ದೊ. ಆಗ ಪಟ್ಟ್‌ಂತ ಗೋರಿ ಹಾಕಿ ಮೀನ್‌ಗಳ ಹಿಡ್‌ಕೊಂಡೊ. ಮತ್ತೆ ಮೀನ್ ಸಿಕ್ಕಿದಾಂಗೆ ಸಿಕ್ಕಿದಾಂಗೆ ಒಂದು ದೊಡ್ಡ ಚೀಲಕ್ಕೆ (ಜೋಳಿಗೆ) ತುಂಬ್ಸಿಕಂಡ್ ವಿಷ ನೀರ್ ಮುಂದೆ ಹರ್ದಂಗೆ ಮುಂದೆನ ಎಲ್ಲಾ ಗುಂಡಿಗಳ್‌ಂದ ಮೀನ್‌ಗಳ ಹಿಡ್ಕಂಡ್ ಹೋದೊ. ಹೋದಂಗೆ – ಹೋದಂಗೆ ವಿಷ ಕಮ್ಮಿಯಾಗಿ ಮೀನ್ ಸಾಯುದು ನಿತ್ತ್ ಹೋತ್.

ಇದೇ ನನ್ನ ದೊಡ್ಡ ಮೀನ್‌ಬೇಟೆ. ಹಿಂಗೆ ವರ್ಷಕ್ಕೆ ಒಂದೋ 2 ಸಲ ನಾನ್ ನನ್ನ ಪಾಸಾಡಿಗಳ್ನ ಕಟ್ಟಿಕಂಡ್ ಮೀನ್ ಹಿಡಿತ್ತಿದ್ದೆ. ಮೀನ್ ಹಿಡ್ದ್ ಆದ ಮೇಲೆ ಯಾರಿಗೆ ಹೆಚ್ಚಿ ಮೀನ್, ಯಾರಿಗೆ ಹೆಚ್ಚ್ ಮೀನಂತ ಕುನ್ತಿ ಮಾಡಿಕಂಡ್ ಮನೆಗೆ ಹೋದ್ರೆ ಅಪ್ಪ–ಅವ್ವ ಬಯ್ಯಿತ್ತಿತ್ತ್‌ಲೆ. ಯಾಕೆ ಹೇಳಿ? ಅವ್‌ಕ್ಕೂ ಮೀನೇಂದ್ರೆ ಇಷ್ಟ ಅದ್ಕೆ. ಮತ್ತೆ ಮೀನ್ ಸಾರ್ – ರೊಟ್ಟಿ. ಒಮ್ಮೊಮ್ಮೆ ಅದರೊಟ್ಟಿಗೆ ಭತ್ತದ ಸಾರಾಯಿ ಇದ್ದೇ ಇದ್ದದೆ. ಅದ್ ಇದ್ರೆ ಮೀನ್ ಸಾರ್ ಬೇಗ – ಬೇಗ ಮುಗ್ದದೆ ಅಲ್ಲಾ? ಮೀನ್ ಗೈಪು ಬೇಗ ಮುಗಿಯಕು. ಯಾಕೆಂತೇಳ್ರೆ ಎಷ್ಟ್ ದಿನ ಸಾರ್ ಇದ್ದದೊ ಅಷ್ಟ್ ದಿನ ಕೊತ್ತಿಗಳ ಕಾಟ ಇದ್ದೇ ಇದ್ದದೆ. ಆಗ ಅವ್ವಂಗೆ ಕೊತ್ತಿ ಓಡ್ಸುವ ಕೆಲ್ಸನೇ ಆಗಿಬುಟ್ಟದೆ ಪಾಪ.

ಹಂಗೆ ನಂಗೆ ಜೇನ್ ಬೇಟೆನ ಹುಚ್ಚೂ ಇತ್ತ್. ಹೈಸ್ಕೂಲಿಗೆ, ಕಾಲೇಜಿಗೆ, ರಜೆ ಇರ್ಕನ ಒಮ್ಮೊಮ್ಮೆ ಹೆಚ್ಚಾಗಿ ಸಾಯಂಕಾಲ ಅಂದ್ರೆ ಸುಮಾರ್ 4–5 ಘಂಟೆ ಹೊತ್ತಿಗೆ ಮನೆ ಹತ್ರದ ಕಾಡ್ ಕಡೆ ಹೋತಿದ್ದೆ.

ಆ ಹೊತ್ತಿಗೆ ಸೂರ್ಯನ ಬಿಸ್ಲ್ ಪಶ್ಚಿಮ ಕಡೆಗೆ ಬಿದ್ದ್ ದೂರಂದ ಮರಗಳ ಸಾಲ್–ಸಾಲ್‌ನ ಎಡೆಗೆ ನೋಡ್ರೆ ಯಾವ ಮರಲಿ ಜೇನ್ ಗೂಡು ಕಟ್ಟಿಕೊಂಡುಟ್ಟುಂತ ಗೊತ್ತಾದೆ. ಹೆಂಗೆ ಗೊತ್ತಾ (ಹಳಬರಿಗೆ ಇದ್ ರೂಡಿ ಅಲ್ಲಾ?) ಜೇನ್ ನೊಣಗ ಗೂಡ್‌ಂದ ದೂರ – ದೂರಕ್ಕೆ ಹಾರಿ ಹೋಗಿ ಹೂಗಳನ್ನೆಲ್ಲಾ ಹುಡ್ಕ್ – ಹುಡ್‌ಕಿ ಮಕರಂದನ ಹೊತ್ತ್‌ಕಂಡ್ ಗೂಡ್ ಕಡೆಗೆ ಹಾರಿ ಬಾಕನ ಅವು ಬಿಸಿಲಿಗೆ ಲಾಯ್ಕ ಕಂಡದೆ. ಒಂದರ ಹಿಂದೆ ಒಂದ್ ನೊಣಗ ಹಾರಿ ಬಂದ್ ಒಂದೇ ಕಡೆ ಬೀಳ್ದು ಕಂಡ್ರೆ ಅಂಥ ಕಡೆ ಯಾವುದೋ ಮರಲಿ ಜೇನ್ ಉಟ್ಟುತ ಅರ್ಥ. ಆ ಕಡೆಗೆ ಹುಡ್ಕಿಕಂಡ್ ಹೋದ್ರೆ ಜೇನ್ ಬೇಟೆ ಗ್ಯಾರಂಟಿ. ಹಿಂಗೆ ನಾನ್ ಆಗಾಗ ಕಾಡ್  ಕಡೆ ಜೇನ್ ಬೇಟೆಗೆ ಹೋತಿದ್ದೆ. ಕಾಡ್ಲಿ ಒಣ್ಗಿದ ಮರ, ಅರ್ಧ ಸತ್ತ ಮರ ಇಂಥ ಮರಗಳ್ಲಿ ದೊಡ್ಡ ದೊಡ್ಡ ಮೋಟೆ ಇರ್ದು ಸಾಮಾನ್ಯ. ಅಂಥ ಕಡೆ ನಿಮಿಗೆ ಹೇಳಿಕೆ ಒಂದೊಂದು ದೊಡ್ಡ ಮರಲಿ 5–10 ಕೆ.ಜಿ. ಜೇನ್ ಸಿಕ್ಕಿದೂ ಉಟ್ಟು. ಇಂಥ ದೊಡ್ಡ ದೊಡ್ಡ ಜೇನ್ ಗೂಡ್ ಸಿಕ್ಕಿ ಬುಟ್ರೆ ಯಾರಿಗಿಲ್ಲೆ ಕುಸಿ ಹೇಳಿ? ಬಾಯಿಗೆ ಸಿಹಿ ಸಿಹಿ ಜೇನ್ ಜೇಬಿಗೆ ಜಣ ಜಣ ದುಡ್ಡ್ (ಜೇನ್ ತೆಗೆಂವ ಕೈ ನೆಕ್ಕದೆ ಇರ್‍ದೊ?) (ಗಾದೆ ಉಟ್ಟಲ್ಲಾ?)

ಜೇನ್‌ಗಳ್ಲಿ ಇನ್ನೂ 3–4 ತರ – ದೊಡ್ಡ ಜೇನ್ (ದೊಡ್ಡ ದೊಡ್ಡ ಮರಗಳ ಕೊಂಬೆಲಿ ಕಟ್ಟುದು), ಕೋಲ್ ಜೇನ್ (ಸಣ್ಣ – ಸಣ್ಣ ಕೋಲ್‌ಲಿ ಕಟ್ಟಿಕೊಂಬುದು), ಮಣ್ಣ್‌ನ ಮಡ್ಕೆ ಜೇನ್, ಪೆಟ್ಟಿಗೆ ಜೇನ್ ಹಿಂಗೆ ನಾನಾ ತರ. ದೊಡ್ಡ ಜೇನ್ ಭಯಂಕರ. ಅದರ ಚೇಷ್ಟೆಗೆ ನೀವ್ ಹೋದ್ರೆ ಸಿಪಾಯಿಗಳಾಂಗೆ ನಿಮ್ಮ ಮೇಲೆ ದಾಳಿ ಮಾಡಿ ಒಮ್ಮೊಮ್ಮೆ ನಿಮ್ಗೆ ಸ್ವರ್ಗದ ದಾರಿನೇ ತೋರ್ಸಿ ಬುಟ್ಟವೆ ಗೊತ್ತಾ? ಎಚ್ಚರವಾಗಿರಕು.

ಒಂದ್ ಜೇನ್ ಗೂಡ್ಲಿ ಯಾವ್ಯಾವ ತರದ ನೊಣಗ ಇದ್ದವೆಂತ ನಿಮ್ಗೆಲ್ಲಾ ಗೊತ್ತುಟು ಅಲ್ಲಾ? ರಾಣಿ ನೊಣ (ಒಂದೇ ಒಂದು), ಗಂಡ್‌ನೊಣ (ಸಾಕಷ್ಟ್), ಮತ್ತೆ ಕೆಲ್ಸಗಾರ ನೊಣಗ (ಅತೀ ಹೆಚ್ಚ್). ಒಟ್ಟಿಗೆ ಒಂದು ಗೂಡ್‌ಲಿ 10 – 12,000 ಇದ್ದವೆ. ರಾಣಿ ನೊಣಕೆ ಮೊಟ್ಟೆ ಹಾಕುದು ಮರಿ ಮಾಡ್‌ದೇ ಕೆಲ್ಸ. ಆದರೆ ಗಂಡ್‌ನೊಣಗ ಸೋಮಾರಿಗ, ಹೆಣ್ಣ್ ನೊಣಗಳೊಟ್ಟಿಗೆ ಅವು ಮಾಡ್ದ ಜೇನ್ ತಿಂದ್ ಹಾಕುದು, ಮತ್ತೆ ಅಲ್ಲಿ–ಇಲ್ಲಿ ಎರಿಕಟ್ಟಿ ಜೇನ್ ತುಂಬುದಕ್ಕೆ ಕೆಲ್ಸಗಾರ ನೊಣಗಳಿಗೆ ಹಂಜ ಸಹಾಯ ಮಾಡ್ದು. ನೋಡಿ ಇವರ ಸಂಸಾರದ

ಕಥೆನ. ಪಾಪದ ರಾಣಿ ಅದರ ಜೀವನಪೂರ್ತಿ (3–5 ವರ್ಷ) ಮೊಟ್ಟೆ ಇಸುದೇ ಕೆಲ್ಸ. ಹಿಂದೆ ನೋಡಿ ನಮ್ಮ ಹೆಣ್ಣ್‌ಮಕ್ಕ ಹೆತ್ತ್ – ಹೆತ್ತ್ ಅವ್ಕೆ ಸಾಕಾಗಿ ಬುಡ್‌ತಿತ್ತ್. ಅವರ ಪಾಡ್‌ನಾಂಗೆ ಈ ರಾಣಿನ ಕಥೆ. ಒಂದ್ 70 ವರ್ಷದ ಅಜ್ಜಿನ ಕೇಳಿ ನೋಡಿ ಹೆಣ್ಣ್‌ಮಕ್ಕಳ ಪಾಡ್ ಏನ್‌ಂತ ಚೆನ್ನಾಗಿ ಅವು ಹೇಳ್ವೆ. ಗಂಡ್ ನೊಣಗಳ ವಯಸ್ಸ್ ಮತ್ತೆ ಹೆಣ್ಣ್‌ಗಳದ್ದ್ 50 ರಿಂದ 60 ದಿನಗ ಮಾತ್ರ. ಮತ್ತೊಂದ್ ನಿಮ್ಗೆ ಹೇಳಿಕ್ಕೆ ಮರತ್ ಬುಟ್ಟೆ. ಆಶ್ಚರ್ಯ ಏನ್ ಗೊತ್ತಾ? ಒಂದು ಪೌಂಡ್ ಜೇನ್ ತಯಾರಿ ಮಾಡಿಕೆ 1 ಕೆಲಸಗಾರ ನೊಣ 20 ಲಕ್ಷ ಹೂಗಳಿಂದ ಅದರ ನೆಕ್ಟರ್‌ನ ಹೀರಿ ಕಂಡ್ ಬಂದ್ ಜೇನ್ ಎರಿಗೆ ಹಾಕೊಕು. ಎಷ್ಟ್ ಕಷ್ಟದ ಕೆಲ್ಸ ನೋಡಿ. ಹೆಣ್ ಹೆಂಗಸಾಗಲಿ ಅಲ್ಲ ಹೆಣ್ಣ್ ಜೇನ್‌ನೊಣ ಆಗಲೀ ಎರ್ಡರ ಪಾಡ್ ಒಂದೇ ತರ ಅಲ್ಲಾ?

ವಿಶೇಷ ಸೂಚನೆ : ಈ ಮೂರು ತರದ ಬೇಟೆಗಳ ವಿಚಾರ ನಮ್ಮ ಕೊಡ್ಗ್‌ನ ವಯಸ್ಕರಿಗೆ ತಕ್ಕ ಮಟ್ಟಿಗೆ ಗೊತ್ತಿದ್ದರೂ ನಮ್ಮ ಇಂದ್‌ನ ಮಕ್ಕಳಿಗೆ ಇವ್‌ಗಳ ವಾಸನೆ ಇಲ್ಲೆ. ಈ ಕಥೆನ ಓದ್ವ ನಮ್ಮ ಮಕ್ಕ ಸ್ವಲ್ಪ ಆದರೆ ತಿಳ್ಕೊಳ್‌ಲಿ ಅಂತ ಇಷ್ಟೆಲ್ಲಾ ಬರ್ದದ್. ನನ್ನ ಬೇಟೆನ ಕಥೆನ ಇಲ್ಲಿಗೆ ಮುಗ್ಸಿನೆ. ಮುಂದೆ ಬೇಟೆ ಸುರು ಮಾಡ್ದು ನೀವ್ ಬಂದರೆ ಮಾತ್ರ, ಬಂದಿಯರಾ? ನಂಗೆ ಫೋನ್ ಮಾಡಿ ಬನ್ನಿ. ನಾನ್ ಜೇನ್ ತಿನ್ನ್‌ತಾ ಇದ್ದನೆ ಆತಾ.

**ಡಾ. ಕೆ.ಎಂ. ಬೋಜಪ್ಪ**
ಬೆಂಗಳೂರು
ಮೊಬೈಲ್ : 9738450971

# ಬನ್ನಿ ಓದೋಮ

ನಮ್ಮ ಸುತ್ತ ಮುತ್ತ ಅನೇಕ ಸಂಗತಿಗಳಿಗೆ ನಾವು ಒಡ್ಡಿಕಂಡೆ ಇದ್ದವೆ. ಕೆಲವು ವಿಸಯಗ ನಮ್ಮನ್ನ ಬಾಳಾ ತಟ್ಟಿದೆ. ಮನ್ಸು ಒಳಗೆ ನಾವು ಒದ್ದಾಡಿ ಬುಟ್ಟವೆ. ಅಂತ ಸಮಯಲಿ ನಮ್ಮ ಕೈ ಹಿಡಿಯದು ಬರಹ. ಆದರೆ ಕೆಲವು, ನನ್ನೊಟ್ಟಿಗೆ ಹೇಳಿಕೆ ತುಂಬಾ ವಿಸಯ ಉಟ್ಟು, ಅಂದರೂ ಬರಿಯಕೇ ಆದುಲೆ ಅಂತ ಹೇಳುವೆ. ನಾವು ಮನ್ಸ್ ಮಾಡಿರೆ ಖಂಡಿತಾ ಸಾಧ್ಯ ಆದೇ ಅಂತ ಹೇಳುದ್ದಕ್ಕೆ ಕಲ್ಕುಳಿ ವಿಠಲ ಹೆಗಡೆಯವರ ‘ಮಂಗನ ಬ್ಯಾಟೆ’ ಪುಸ್ತಕನೇ ಸಾಕ್ಷಿ. ನಂಗೆ ಬರೀಯಕೆ ಬಾದುಲೆ ಅಂತ ಹೇಳಿಕಂಡೆ ಈ ಕೃತಿ ಬರ್ದೊಳೊ. ಮತ್ತೆ ಈ ಪುಸ್ತಕಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಕೂಡ ಸಿಕ್ಕಿಟು. ಇದೊಂದು ಪರಿಸರ ಕಥನ. ಈ ಕೃತಿನ ಇಲ್ಲಿ ಪರಿಚಯಿಸುವ ಉದ್ದೇಶ ಏನುಂತೆಳಿರೆ, ನಮ್ಮ ಕೊಡಗು ಮತ್ತು ದಕ್ಷಿಣ ಕನ್ನಡಲಿ ನಾವು ಕೃಷಿಕರು ಎದುರಿಸುತ್ತಿರುವ ಬಾರೀ ದೊಡ್ಡ ಸಮಸ್ಯೆ ಕುರ್ರೆಗಳ ಹಾವಳಿ ಮತ್ತೆ ಆನೆಗಳ ಕಾಟ. ಪ್ರತಿ ದಿನ ಇಂತ ಸಮಸ್ಯೇಲಿ ಬೊದ್ಕುತ್ತಿರುವ ನಮಗೆ ಯಾಕೆ ಇಂತ ಪುಸ್ತಕಗಳನ್ನ ಬರಿಯಕೆ ಸಾದ್ಯ ಇಲ್ಲೆ. ತೇಜಸ್ವಿ, ಕುವೆಂಪು ಕಂಡ ಪರಿಸರದ ಚಿತ್ರಣ ನಮ್ಮಿಂದ ಕೂಡ ಸಾದ್ಯ ಆಕು. ಅದಿಕ್ಕಾಗಿ ‘ಮಂಗನ ಬ್ಯಾಟೆ’ಯ ಒಂದು ಸಣ್ಣ ಪರಿಚಯ ‘ಬನ್ನಿ ಓದೊಮೋ’ ಅಂಕಣಲಿ ನಿಮ್ಮ ಮುಂದೆ ಇಟ್ಟೊಳೊ. ನೀವು ಪ್ರಯತ್ನಿಸಿ ನೋಡಿ, ಒಂದೊಳ್ಳೆ ಕೃತಿ ನಮ್ಮ ಅರೆಬಾಸೆಲಿ ಬರುವಂಗಾಗಲಿ.

“ತೋಟದ ಔಷಧಿ ಆಯ್ತಾ?” ಅಂದೆ.

ಅದಕ್ಕೆ ಅವರು “ಔಷಧಿನೂ ಇಲ್ಲ, ಕಷಾಯನೂ ಇಲ್ಲ, ಮಂಗ ಬಿಟ್ರಲ್ಲ” ಎಂದರು.

“ಏನು ಸಮಾಚಾರ?” ಅಂದೆ.

“ನೋಡಿ, ನೀವೆಲ್ಲಾ ನಮ್ಮನ್ನು ಉಳಿಸಬೇಕು ಅಂತ ಎಷ್ಟೊಂದು ಹೋರಾಟ ಮಾಡಿದ್ರಿ. ಆದರೆ ಈಗ ನಾವಾಗಿಯೇ ಊರು ಬಿಡಂಗೆ ಆಗಿದೆ” ಅಂದ್ರು.

“ಯಾಕೆ ಏನಾಯಿತು?” ಕೇಳಿದೆ.

ಅದಕ್ಕೆ ಭಟ್ಟರು “ಪೇಟೆ ಕಡೆಯಿಂದ ಲೋಡುಗಟ್ಟಲೆ ಮಂಗಗಳನ್ನು ಹಿಡಿದು ತಂದು ನಮ್ಮಲ್ಲಿ ಬಿಡ್ತಿದ್ದಾರೆ. ಆ ಮಂಗಗಳೋ ಒಂದೊಂದೂ ಹುಡುಗರಷ್ಟು ಎತ್ರ ಇದ್ದಾವೆ. ಮನುಷ್ಯರಿಗೆ ಕ್ಯಾರೇ ಅನ್ನಲ್ಲ. ಎರಡೊಳ್ಳೆ

ನಾಯಿ ಸಾಕಿ ತೋಟದಲ್ಲಿ ಕಟ್ಟಿದೆ. ಆದರೆ ಆ ಮಂಗಗಳು ನಾಯಿಗೂ ಹೊಡೆದು ನಾಯಿಯೊಂದರ ಕಣ್ಣು ಹೋಗಿದೆ. ನಮಗೆ ಗೊತ್ತಿರೋದೆಲ್ಲ ಮಾಡಿ ಆಯಿತು. ಆಂಜನೇಯನಿಗೆ ಎಲೆಪೂಜೆ, ಮೊಸರು ಅಭಿಷೇಕ, ಪೂಜೆ ಪುನಸ್ಕಾರ ಎಲ್ಲಾ ಮುಗಿಯಿತು. ಆದ್ರೂ ಅವುಗಳ ಕಾಟ ತಪ್ಪಿಲ್ಲ. ಅವು ಪೇಟೆ ಮಂಗಗಳು. ಅದಕ್ಕೆ ಯಾವುದೂ ನಾಟುವುದಿಲ್ಲ. ಅವುಗಳೊಂದಿಗೆ ಹೋರಾಡಿ ಸಾಕಾಗಿಹೋಗಿದೆ.... ನಾವು ಹೆಂಗಾರೂ ಬದುಕಬೇಕಲ್ಲ. ಇದೆಲ್ಲಾ ನೋಡಿ... ನೋಡಿ ಸಾಕಾಗಿ, ಇನ್ನು ಇಲ್ಲಿರೋದು ಸಾಧ್ಯನೇ ಇಲ್ಲ ಅಂತ ಈಗ ಅಡುಗೆ ಕಂಟ್ರಾಕ್ಟು ಹಿಡಿದು ಶಿವಮೊಗ್ಗಕ್ಕೆ ಹೋಗ್ತಿದ್ದೇನೆ. ಈ ಹಿಂದೆ ಅಡಿಗೆ ಕೆಲಸ ಮಾಡಿಕೊಂಡು ಹೊಗೆ, ಬೆಂಕೀಲಿ ದುಡಿದದ್ದನ್ನೆಲ್ಲಾ ತಂದು ಇಲ್ಲಿಗೆ ಸುರಿದಿದ್ದೆ. ಈಗ ಅದೆಲ್ಲ ನೀರಲ್ಲಿ ಹೋಮ ಆದಂತಾಗಿದೆ. ಸರ್ಕಾರ ಇಷ್ಟು ದಿನ ನಮಗೆ ಕೊಟ್ಟ ಹಿಂಸೆ ಸಾಲ್ದು ಅಂತ ಈಗ ನಮ್ಮನ್ನು ನಾಶ ಮಾಡಕ್ಕೆ ಈ ಮಂಗಗಳನ್ನು ಬಿಡುವ ಹೊಸ ಪ್ಲಾನು ಮಾಡಿದೆ..." ಅಂತ ಒಂದೇ ಸಮನೆ ಅವರು ತಮ್ಮ ಗೋಳು ತೋಡಿಕೊಂಡರು.

ಕಾಡಿನಲ್ಲಿ ಬದುಕುವ ಜನ ಪ್ರಾಣಿಗಳ ಹಾವಳಿಯಿಂದಾಗಿ ಊರು ಬಿಟ್ಟ ಉದಾಹರಣೆ ನಮ್ಮಲ್ಲಿ ಇರಲಿಲ್ಲ. ಹಾಗೆ ಅವರು ಪ್ರಾಣಿಗಳ ಕಾಟಕ್ಕೆ ಹೆದರಿದ್ದರೆ ನೂರಾರು ವರ್ಷಗಳಿಂದ ಮಲೆನಾಡಲ್ಲೇ ಕೃಷಿ ಮಾಡಿಕೊಂಡು ಜನ ಬದುಕುತ್ತಿರಲಿಲ್ಲ. ಆದರೆ ಈಗ ಈ ಬ್ರಾಹ್ಮಣ ಮಂಗಗಳ ಕಾಟಕ್ಕೆ ಹೆದರಿ ಊರನ್ನೇ ತೊರೆಯುವ ಯೋಚನೆ ಮಾಡಿದ್ದಾರೆ. ಇದನ್ನು ಕೇಳಿ ನನಗೆ ಆಶ್ಚರ್ಯವಾಯ್ತು. ಅಲ್ಲದೆ ಇದು ಒಂದು ರೀತಿಯಲ್ಲಿ ನಮ್ಮ ಹೋರಾಟದ ಸೋಲು ಅನ್ನಿಸ್ತು. ಬಸ್ಸಿನ ಶಬ್ದ, ಅಕ್ಕಪಕ್ಕದವರ ಗಲಾಟೆಯಿಂದಾಗಿ ಹೆಚ್ಚಿನದ್ದು ಕೇಳಿಸದೇ ನನಗೆ ಏನೇನೂ ಹೊಳೆಯದಾಯಿತು. ಇದರ ಮಧ್ಯೆ "ಮಂಗನ ಬ್ಯಾಟೆ ಮಾಡಲ್ವ?" ಎಂದು ನಾನು ಕೇಳಿದೆ.

"ಈಗೆಲ್ಲಿ ಮಂಗನ ಬ್ಯಾಟೆ? ಬ್ಯಾಟೆ ಮಾಡೋದನ್ನು ಸರ್ಕಾರ ನಿಷೇಧಿಸಿದೆ. ಅಷ್ಟಕ್ಕೂ ಬ್ಯಾಟೆ ಆಡಕ್ಕೆ ಊರಲ್ಲಿ ಒಗ್ಗಟ್ಟೆಲ್ಲಿದೆ? ಬ್ಯಾಟೆ ಆಡಿದ ಮೇಲೆ ಮಂಗನ್ನ ತಿನ್ನೋರೂ ಬೇಕಲ್ಲ?" ಎಂದು ಅವರು ಮಂಗನ ಬ್ಯಾಟೆಯ ಕಷ್ಟಗಳನ್ನು ಹೇಳ್ಕೊಂಡ್ರು.

ಮನೆಗೆ ಬಂದ ನಂತರ ಪೋಸ್ಟ್ ನೋಡಿದರೆ ಶಿವಮೊಗ್ಗದಲ್ಲಿರುವ ಮಲೆನಾಡಿನ ಪ್ರತಿಷ್ಠಿತ ಅಡಕೆ ಮಾರಾಟ ಸಹಕಾರ ಸಂಘ – ಮ್ಯಾಮ್‌ಕೋಸ್ (Mamcos) ತನ್ನ ವಾರ್ಷಿಕ ವರದಿಯನ್ನು ಕಳುಹಿಸಿತ್ತು. ಆ ವರದಿಯಲ್ಲಿ ಮುಂದಿನ ಸಾಲಿನ ಯೋಜನೆಗಳಲ್ಲಿ 'ಮಂಗನ ಹಾವಳಿ ನಿಯಂತ್ರಣ'ವನ್ನು ಮುಖ್ಯ ವಿಷಯವನ್ನಾಗಿ ಅಂಗೀಕರಿಸಿತ್ತು.




## ಹೊಸ ವರ್ಷ

ದಿನಂಗ ಬೇಗ ಬೇಗ ಹೋಗಿ
ಬಾತ್, ಹೊಸ ವರ್ಷ.
ಹಳೆ ಬೇರು ಹೋಗಿ, ಹೊಸ ಚಿಗ್‌ರ್ ಮೂಡಲಿ
ಅಜ್ಞಾನ ಹೊರಗೆ ಹೋಗಿ ಸುಜ್ಞಾನ ತುಂಬಲಿ
ಎಲ್ಲಾ ಕಹಿ ನೆಂಪುಗ ಮರ್ತ್,
ಹೊಸ ಬೊದ್ಕಿಗೆ ಉತ್ಸಾಹ ಮೂಡಲಿ.
ಸಾವಿರ ಕಷ್ಟ ಬಂದರೂ ಎದುರ್ಸುವ
ಶಕ್ತಿ ಕೊಡಲಿ, ಆ ದೇವ್ರು
ಕಿರ್‌ನಗೆ ಮೂಡಲಿ ಎಲ್ಲರ ಮೋರೆಲಿ,
ಒಟ್ಟುಲಿ ಕುಸಿ – ಕುಸಿಲಿ ಸ್ವಾಗತಿಸಿಸೊಮೊ
ಹೊಸ ವರ್ಷದ ಹೊಸ ದಿನಂಗಳ..

---

**ದೀಕ್ಷಾ ಕೆ. ಐವರ್ನಾಡು**
ಐವರ್ನಾಡು ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದ.ಕ. – 574239

## ನಾವಿರೊಕು ಇವನಂಗೆ




ದಿನಾ ಬೆಳಗಾದರೆ ಅಂವ ಬಾರದಿರ್ದುಲೇ
ಕತ್ತಲಾಕನ ಅಂವನ ಮೋರೆ ಮರಿಯದುಲೇ

ಬೆಳಗೆದ್ದ್ ನೋಡದಿದ್ದರೆ ಅವನ,
ಮನಸ್ಸಿಗೆ ಇರ್ದುಲೇ ಸಮಧಾನ.

ದೊಡ್ಡವ ಸಣ್ಣವಂತೇಳೋ ಕಿಳರಿಮೆ ಅವಂಗಿಲ್ಲೆ
ಬೈದರೂ ಹೊಡ್ದರು ಕ್ಯಾರೆ ಇಲ್ಲೆ.

ದೂರ ಹೋದರು ಕಷ್ಟ ಹತ್ರ ಬಂದರೂ ಕಷ್ಟ
ಬಾರದೇ ಇದ್ದರೆ ನಮಿಗೆ ಬದ್‌ಕೇ ನಷ್ಟ.

ನಮ್ಮಂಗೆ ಅವಂಗಿಲ್ಲೆ ನೂರೆಂಟು ಆಸೆ
ತಪ್ಪುಲೇ ಅಂವ ಲೋಕಕ್ಕೆ ಕೊಟ್ಟ ಭಾಷೆ.

ಕರ್ದವೇ ಅವನ ನಾಲ್ಕಾರ್ ಹೆಸ್‌ರ್
ಕಣ್ಣಿಗೆ ಕಾಂಬೋದು ಅವನೊಬ್ಬನೆ ದೇವರ್.

ನಾವ್ ಇರೊಕು ಇವನಂಗೆ,
ಯಾರ ಮಾತಿಗೂ ಕಿವಿ ಕೊಡದಂಗೆ.

ಜಗ್ಗದೆ ಬಗ್ಗದೆ ಹೋರಾಡಿಕೆ
ಭಾಷೆ ಪದ್ಧತಿ, ಸಂಸ್ಕೃತಿನ ಉಳ್ಸಿ ಬೆಳ್ಸ್‌ಕೆ.

---

**ಬೈಲೇರಾ ಭಾನು ಅಶೋಕ್, ಬಳಿಗೇರಿ**

## ತೊಟ್ಟಿಲ ಹಾಡು
### (ಹೆಣ್ಣ್ ಕೂಸುನ ಸುರು ತೊಟಗಿಲ್‌ಗೆ ಹಾಕಿ ಒಚ್ಚ್‌ಕನ ಹೇಳುವ ಪದ)

ಹ್ಞೂಂಹ್ಞೂಂ ಹ್ಞುಂಹ್ಞುಂಹ್ಞೂಂ ಹ್ಞೂಂಹ್ಞೂಂ ಹ್ಞುಂಹ್ಞುಂಹ್ಞೂಂ
ಹ್ಞೂಂಹ್ಞೂಂಹ್ಞೂಂ ಹ್ಞುಂಹ್ಞೂಂ ಹ್ಞೂಂಹ್ಞೂಂಹ್ಞೂಂ
ಜೋಜೋ ಜೋಜೊಜೊ ಜೋಜೋ ಜೋಜೊಜೊ
ಜೋಜೋಜೊ ಜೋಜೋ ಜೋಜೋಜೋ

ಲೋಕದ ತೊಟಗಿಲ್ ಕಟ್ಟಿ ಸಿರಿದೇವಿ ಮಲ್ಗಿಟು
ಬನ್ಯಣ್ಣ ಎಲ್ಲವು ಬನ್ಯಣ್ಣ ಬನ್ಯಕ್ಕ ಒಚ್ಚಿಕೆ ಬನ್ಯಕ್ಕ
ಎಳ್ತೆಳ್ತ್ ಕೂಸಾಗಿ ಕುಸಿಲಿ ನೆಗಡ್ತುಟ್ಟು
ಬನ್ಯಣ್ಣ ಎಲ್ಲವು ಬನ್ಯಣ್ಣ ಬನ್ಯಕ್ಕ ಒಚ್ಚಿಕೆ ಬನ್ಯಕ್ಕ
ಬನ್ಯಕ್ಕ ಅಣ್ಣಂದರ್ ಬನ್ಯಪ್ಪ ಬಂದ್ ಹಾರೈಸಿಕೆ ಬನ್ಯಪ್ಪ
ಬನ್ಯಕ್ಕ ಅಣ್ಣಂದರ್ ಬನ್ಯಪ್ಪ ಬಂದ್ ಹಾರೈಸಿಕೆ ಬನ್ಯಪ್ಪ //ಲೋಕದ//
ಅಯ್ಯಪ್ಪ ಅಜ್ಜಿಜ್ಜ ಅಕ್ಕನವು ಅಣ್ಣನವು

ಅಯ್ಯಪ್ಪ ಅಜ್ಜಿಜ್ಜ ಅಕ್ಕನವು ಅಣ್ಣನವು
ನೆಂಟ್ರ್‌ಗಳೆ ಎಲ್ಲ ಸಮ್ಮಂದದವೆ
ಬನ್ಯಕ್ಕ ಅಣ್ಣಂದರ್ ಬನ್ಯಪ್ಪ ಬಂದ್ ಹಾರೈಸಿಕೆ ಬನ್ಯಪ್ಪ //ಲೋಕದ//

ಮೂರೇ ದೂಂಚಿಲಿ ಮಹಿಷನ ಮುಗ್ಸಿದ
ಮೂರೇ ದೂಂಚಿಲಿ ಮಹಿಷನ ಮುಗ್ಸಿದ
ಚಾಮುಂಡಿ ಮಲ್ಗಿಟು ನೋಡಿಲ್ಲಿ
ಬನ್ಯಕ್ಕ ಅಣ್ಣಂದರ್ ಬನ್ಯಪ್ಪ ಬಂದ್ ಹಾರೈಸಿಕೆ ಬನ್ಯಪ್ಪ //ಲೋಕದ//

ಮೂಕಾಸುರನ ಇಲ್ಲಿಂದ ಕಳ್ಸಿದ
ಮೂಕಾಸುರನ ಇಲ್ಲಿಂದ ಕಳ್ಸಿದ
ಮೂಕಾಂಬಿಕೆ ಮಲ್ಗಿಟು ನೋಡಿಲಿ
ಬನ್ಯಕ್ಕ ಅಣ್ಣಂದರ್ ಬನ್ಯಪ್ಪ ಬಂದ್ ಹಾರೈಸಿಕೆ ಬನ್ಯಪ್ಪ //ಲೋಕದ//

ಹೆತ್ತವ್ವ ಅಪ್ಪಂಗೆ ಬೊಳ್ಪಾಗಿ ಬಂದಂತ
ಹೆತ್ತವ್ವ ಅಪ್ಪಂಗೆ ಬೊಳ್ಪಾಗಿ ಬಂದಂತ
ಚಾಮಿ ಬಾಬೆ ಮಲ್ಗಿಟು ನೋಡಿಲ್ಲಿ
ಬನ್ಯಕ್ಕ ಹರ್ಸಿಕೆ ಬನ್ಯಣ್ಣ ತಲೆ ಮೇಲೆ ಕೈ ಇಸಿಕೆ ಬನ್ಯಪ್ಪ //ಲೋಕದ//

ಸೀತಾರಾಮ ಕೇವಳ
Cell: 94487 25813 E-Mail: principalseetharamakevala@gmail.com

# ಹಿಂಗಾರ

ಹಿಂದೆ ನಮ್ಮ ಜನಾಂಗದವು
ಇದ್ದೊ ಎಲ್ಲ ದೂರ ದೂರ
ಈಗ ನೋಡಿ ದಿನಂದಿನಕ್ಕೆ
ಆಗ್ತಾ ಒಳೊ ಬಾರಿ ಹತ್ರ
ಅಕಾಡೆಮಿಂದ ಬರ್ತಾ ಉಟ್ಟು
ಒಳ್ಳೆ ಒಳ್ಳೆ ಸೂತ್ರ
ಆನ್ಲೈನ್ ಆಫ್ಲೈನ್ ಎಲ್ಲಿ ನೋಡ್ರೂ
ಚಟುವಟಿಕೆಗ ನಿರಂತರ
ಕಥೆ, ಕವನ, ಲೇಖನ,
ಸಾಹಿತ್ಯಗಳ ಶೃಂಗಾರ
ಅದಕ್ಕೆ ಆಸರೆಯಾಗಿ ಬಂದುಟು ಈಗ
ಪ್ರೀತಿಯ ಈ 'ಹಿಂಗಾರ'.!

**ಪ್ರೀತಮ್ ಎ. ಜಿ.**
ಅಡ್ಕಾರು ಮನೆ,
ಜಾಲ್ಸೂರು ಅಂಚೆ,
ಸುಳ್ಯ ತಾಲೂಕು, ದ.ಕ. –574239
ದೂರವಾಣಿ: 9740542944






# ಈಶಾನ್ಯ ರಾಜ್ಯಗಳಿಗೆ ಒಂದು ಪ್ರವಾಸ



**ಕುಯಿಂತೋಡು ದಾಮೋದರ**

ನಂಗೆ ಅದೇಕೊ ಈಶಾನ್ಯ ರಾಜ್ಯಗಳಿಗೆ ಪ್ರವಾಸ ಹೋಕುಂತ ತುಂಬಾ ದಿನಗಳ್ಂದ ಆಶೆ ಇತ್ತ್. ಯಾಕೆ? ಅಲ್ಲಿನ ಭೌಗೋಳಿಕ ಸ್ತಿತಿ, ಗತಿಗಳ ಆಕರ್ಸಣೆ, ಪ್ರಾಕೃತಿಕ ಸೌಂದರ್ಯ, ಮುನ್ನೂರರ ಹತ್ರ ಇರುವ ಬುಡಕಟ್ಟ್ ಜನಾಂಗ, ಅವರ ಹಾಡ್ ಕೊಣ್ತಗಳ ಸಾಂಸ್ಕೃತಿಕ ಹಿನ್ನೆಲೆ, ಪೌರಾಣಿಕ ಹಿನ್ನೆಲೆ, ಮೇಲಾಗಿ 1962 ಮತ್ತು 1964ಲ್ಲಿ ಅರುಣಾಚಲ ಪ್ರದೇಶದ ಮೇಲೆ ಚೀನಾ ನಡ್ಸಿದ ದಾಳಿಯ ಪ್ರದೇಶಗಳನ್ನೆಲ್ಲ ಕಣ್ಣಾರೆ ಕಾಂಬ ಕಾತರ. ಹಾಂಗೇನೆ ಚೀನದ ಗಡಿವರೆಗೂ ಹೋಕುಂತೇಳ್ವ ಆಶೆ. ಇದೆಲ್ಲ ಹೋಗು ಹೋಗುಂತ ಹೇಳ್ತಿತ್ತ್. ಆದ್ರೆ ಹೋದು ಹೇಂಗೆ? ಈ ಪ್ರದೇಶ ಯಾವ ಕಡೆಯ ಟೂರಿಸ್ಟ್‌ನವು ಕೂಡ ಇಲ್ಲಿಗೆ ಪ್ರವಾಸ ಏರ್ಪಾಡ್ ಮಾಡ್ತಿತ್ಲೆ. ದಿಲ್ಲಿಲಿರುವ ಯನ್.ಸಿ.ಇ.ಆರ್.ಟಿ.ಯವು ಒಮ್ಮೆ ಪ್ರೌಢಶಾಲೆಗಳ ಮುಖ್ಯಸ್ತರಿಗಾಗಿ ಅಂದರೆ ಇಡೀ ದೇಶದ ಯಾವ ಶಾಲೆಗಳ್ಂದ ಮೂರು ತಿಂಗಳ ತರಬೇತಿಗೆ ಸಹಾಯಕ ಮಾಸ್ಟ್ರ್‌ಗ ಹೋಗಿದ್ದನೋ ಆ ಶಾಲೆಯ ಮುಖ್ಯಸ್ತರ್‌ನ ಮಾತ್ರ ಮೂರು ದಿನಗಳ ಒಂದು ಕಾರ್ಯಕ್ರಮಕ್ಕೆ ಸರಕಾರದ ಖರ್ಚಿಲಿ ಕರ್ದಿದ್ದೊ. ಹಾಂಗೆ ನಾನ್ ಹೋಗಿರಿಕಾಕನ ಪರಿಚಯ ಆದವರ್ಲಿ ಅಸ್ಸಾಮಿನ ಒಬ್ಬಳ್ ಹೆಡ್‌ಮಿಸ್ಟ್ರೆಸ್ ಇದ್ದೊ. ಅವರೊಟ್ಟಿಗೆ "ನಿಮ್ಮ ಊರಿಗೆ ಬರೊಕೋ" ಅಂತ ಕೇಳಿಕಾಕನ ನಮ್ಮ ಊರು ಅಸ್ಸಾಮಿಗೆ ಬರಕ್, ಆದರೆ ಉಳಿದ

ರಾಜ್ಯಗಳಲ್ಲಿರುವ ಬುಡಕಟ್ಟ್ ಜನಾಂಗಳೊಳಗೆ ನಡೆವ ಒಳ ಜಗಳ, ಹೊರಗಿಂದ ಮುಖ್ಯವಾಗಿ ಬಾಂಗ್ಲಾಂದ ವಲಸೆ ಬಂದವರ್ಂದಾಗುವ ಗಲಾಟೆ, ಬೋಡೋ ಚಳವಳಿ, ನಾಗಾಗಳ ಸ್ವತಂತ್ರ ರಾಜ್ಯಗಳ ಬೇಡಿಕೆ, ಜೊತೆಗೆ ಚೀನದ ಪಿತೂರಿ, ಹೀಂಗೆ ನಾನಾ ಸಮಸ್ಯೆಗಳ ಬಗ್ಗೆ ತಿಳ್ಸಿ ಅಪಾಯದ ಮುನ್ಸೂಚನೆ ಹೇಳಿದ್ದೊ. ಹಾಂಗಾಗಿ ದೇಶದ ಈ ಪ್ರದೇಶ ಹೊರ್ತಾಗಿ, ಉಳ್ದ ಕಡೆಗಳ ಉದ್ದಗಲಕ್ಕೆ ಹೋಗಿ ಬಂದರೂ ಈ ಆಸೆನ ಬುಟ್ಟ್ ಸುಮ್ಮನೆ ಇದ್ದೆ.

ಆಗ ಒಂದಿನ ಅಂದ್ರೆ 2011ರ ನವೆಂಬರ್ ತಿಂಗಳ 2ನೇ ವಾರದ ಒಂದು ದಿನ ಶ್ರೀ ಕಲಮರಡಪ್ಪ ಎಂಬ ಮೈಸೂರಿನ ನಮ್ಮ ಪ್ರವಾಸಿ ಸಿನೇಹಿತರ್ ಕಾಲ್ ಮಾಡಿ "ನಾವಿಬ್ಬರ್ ಅಸ್ಸಾಮು ಕಡೆ ಪ್ರವಾಸ ಹೋದವೆ ನೀವು ಬಂದರೆನೋ?" ಅಂತ ಕೇಳ್ದೊ. "ಸರಿ ಬಂದವೆಂತ" ಹೇಳಿ ಬೇಕಾದ ತಯಾರಿ ಮಾಡಿ ನವೆಂಬರ್ 26ಕ್ಕೆ ಬೆಂಗಳೂರಿಗೆ ಹೋಗಿ ಮಾರ್ನೆ ದಿನ ಬೊಳ್ಪಿಗೆ 9 ಗಂಟೆಗೆ ಬೆಂಗಳೂರಿನ 'ಕೆಂಪೇಗೌಡ' ವಿಮಾನ ನಿಲ್ದಾಣಕ್ಕೆ ಹೋದೊ. ನಮ್ಮ ಮಿತ್ರರೂ ಅಲ್ಲಿಗೆ ಬಂದಿದ್ದೊ. ಅಂದೇ ಹತ್ತ್ ಗಂಟೆಗೆ ವಿಮಾನದ ಹೊತ್ತು. ನಾವು ಬೆಂಗಳೂರ್ಂದ ಕೊಲ್ಕತ್ತಕ್ಕೆ ಹೋಗಿ ಅಲ್ಲಿಂದ ಅಸ್ಸಾಮಿನ ಹಳೆ ರಾಜಧಾನಿ ಗೌಹಾತಿಗೆ ಹೋಗಿ ಇಳ್ದೊ.

ನಮ್ಮ ಮಿತ್ರರ ಹೆಸ್ರ್ ಕಲಮರಡಪ್ಪಲ್ಲಂತ ಕೇಳಿ ನೀವ್ಗೆ ಆಶ್ಚರ್ಯ ಆದು. ನೀವ್ಗೇಕೆ ಸುರೂಗೆ ನಂಗೇನೆ ಆಗ್ತಿತ್ತ್. ಇದೆಂತ ವಿಚಿತ್ರ ಹೆಸ್ರ್ಂತ. ಈಗಳೂ ಅವರ ಈ ಹೆಸ್ರ್‌ಲಿ ಕರೆಕೆ ಒಂದು ತರ ಆದೆ. ಅವರ ಊರು ಶಿವಮೊಗ್ಗ ಕಡೆ. ಅಲ್ಲಿನ ಊರು ದೇವ್ರ ಹೆಸ್ರ್ ಕರಮರಡಪ್ಪ ಅಂತಗಡ. ಆ ದೇವ್ರಿಗೆ ಹರಕೆ ಹೇಳಿಕಂಡ್ ಹುಟ್ಟಿದ ಕಾರಣ ಅದೇ ಹೆಸ್ರ್ ಇಟ್ಟ್ಕೆ ಹಾಕಿದ್ದೊ. ಇವು ಶಾಲಾ ಇನ್ಸ್‌ಪೆಕ್ಟರಾಗಿ, ಪ್ರೌಢಶಾಲಾ ಮುಖ್ಯಸ್ಥರಾಗಿ, ಟಿ.ಸಿ.ಹೆಚ್. ಕಾಲೇಜಿನ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದ ಮೇಲೆ ಈಗ ಮೈಸೂರಿನ ಮರಿಮಲ್ಲಪ್ಪ ಪ್ರೌಢಶಾಲೆನ ಆಡಳಿತಾಧಿಕಾರಿಯಾಗಿ ದುಡಿಯುತ್ತೊಳೊ. ಅವರ ಶ್ರೀಮತಿ ನೀಲಮ್ಮನವು ಸಾರ್ವಜನಿಕ ಶಿಕ್ಷಣ ಇಲಾಖೆಲಿ ಹಿರಿಯ ಸಹಾಯಕ ನಿರ್ದೇಶಕರಾಗಿದ್ದ್ ನಿವೃತ್ತರಾದೊವು. ಇವು ಅಮೇರಿಕ, ಯುರೋಪು, ಚೀನಾ ದೇಶಗಳಿಗೂ ಪ್ರವಾಸ ಹೋಗಿ ಅನುಭವ ಪಡ್ದವು.

ನಾವ್ ಇಳ್ದ ಜಾಗ ಗೌಹಾತಿನ ಪೌರಾಣಿಕ ಹೆಸ್ರ್ 'ಪ್ರಾಗ್ಜ್ಯೋತಿಷಪುರ' ಅಂತ. ಇದ್ ಹಿಂದೆ ನರಕಾಸುರನ ರಾಜಧಾನಿ ಆಗಿತ್ತ್‌ಗಡ. ಮಹಾಭಾರತ ಕಾಲಲಿ ಪಾಂಡೊವುಕೂ ಕೌರವಕೂ ದೊಡ್ಡ ಜಗಳ ಆಗಿತ್ತಲ್ಲ. ಆಗ ಕೌರವರ ಕಡೆಂದ ಒಂದು ಹಳದಿ ಸೈನ್ಯ ಇತ್ತಂತ ಒಂದು ಉಲ್ಲೇಖ ಉಟ್ಟು. ಅದರ ನಾಯಕ ಭಗದತ್ತಂತೇಳವ. ಅಂವ ನರಕಾಸುರನ ಮಂಜ. ಅಸ್ಸಾಮುನ ಬುಡಕಟ್ಟ್ ಜನಾಂಗ ಹಳದಿ ಬಣ್ಣದೊವು. ಅಂದರೆ ಮೊನ್ಸರ್ಲಿ ಮುಖ್ಯವಾಗಿ ಮೂರು ಬಣ್ಣದೊವು. ಗೌರವ ಬಣ್ಣದ ಆರ್ಯರ್, ಕಪ್ಪು ಬಣ್ಣದ ನೀಗ್ರೋಗ ಮತ್ತು ಹಳದಿ ಬಣ್ಣದ ಮಂಗೋಲಿಯನ್‌ನವು. ಹಳದಿ ಬಣ್ಣದ ಮಂಗೋಲಿಯನ್ ಜನಾಂಗದೊವು ಚೀನಾ, ಟಿಬೇಟ್ ಈಗಿನ ಮಾಯನ್ಮಾರ್, ಕೊರಿಯಾ, ವಿಯೆಟ್ನಾಮ್ ಕಡೆ ಈ ದಾರಿಯಾಗಿ ವಲಸೆ ಹೋಕಾಕನ ಕೆಲವು ಜನ ಈ ಪ್ರದೇಶಲಿ ಉಳ್ಕಂಡ್ ಹಿಂದೂ ಸಂಸ್ಕೃತಿನ ಬೆಳ್ಸಿಕಂಡೊಂತ ಜನಾಂಗಗಳ ಬಗ್ಗೆ ಅಬ್ಯಾಸ ಮಾಡ್ದೊವು ಹೇಳಿಯೊಳೊ. ಹಾಂಗೆನೆ ಈಶಾನ್ಯ ರಾಜ್ಯಗಳ್ಲಿ ಇನ್ನೊಂದು ಪುರಾಣದ ಊರುಂತೇಳಿರೆ ಮಣಿಪುರ. ಇದ್ ಅರ್ಜುನನ ಮಂಜ ಬಬ್ರುವಾಹನನ ಊರು. ಅರ್ಜುನನ ತೀರ್ಥಯಾತ್ರೆ, ಉಲೂಪಿ, ಚಿತ್ರಾಂಗದೆಯರ ಪ್ರಸಂಗ ಎಲ್ಲ ನೀವ್ಗೆ ಗೊತ್ತಿರಿಕೂ ಸಾಕ್.

ನಾವ್ ಗೌಹಾತಿಲಿ ಇಳಿಯಕಾಕನ ಸುಮಾರ್ ಮೂರೂವರೆ ಗಂಟೆಯೇನೋ ಆಗಿತ್ತ್. ನಮ್ಮ ಪ್ರವಾಸದ ಏಜೆಂಟ್ ಸಂಜಯ ಘೋಷ್ ವಾಹನ ಮತ್ತು ಚಾಲಕನ ಸಹಿತ ನಿಲ್ದಾಣಲಿ ತಯಾರಾಗಿತ್ತ್. ಊಟದ ಹೊತ್ತೂ ಮೀರಿತ್ತ್. ನಾವು ಉಪಹಾರ ಮುಗ್ಸಿಕಂಡ್ ಮೇಘಾಲಯದ ಶಿಲ್ಲಾಂಗ್‌ಗೆ ಹೋಗಿ ನಾವ್ಗಾಗಿ ಕಾದಿರಿಸಿದ ಚಿರಾಪುಂಜಿ ವಸತಿ ನಿಲಯಲಿ ಉಳ್ಕಂಡೊ.

ಮಾರ್ನೆ ದಿನದ ನಮ್ಮ ಕಾರ್ಯಕ್ರಮ 'ಬೇರ್ನ ಪಾಲ' (Root Bridge) ನೋಡಿಕೆ ಹೋದು. ಬೇರ್ನ ಪಾಲ ನೋಡಿಕೆ ಅಷ್ಟ್ ದೂರ ಹೋಕೋ ಅಂತ ನೀವ್ಗೆ ಅನ್ಸುದು. ಆದರೆ ಅದರ ಪೊರ್ಲು ನೋಡೊಕು. ಎಷ್ಟ್ ಪೊರ್ಲಾಗಿ ಅದರ ಹೆಣ್ದೊಳಂತ ನೋಡ್ದ ಮೇಲೆ ಗೊತ್ತಾದು. ಗುಡ್ಡೆ, ಬಳ್ಳಿ ಇಳ್ದ್ ಕಾಡಿನ ನಡೂಲಿ ಹೋದೇ ಒಂದು ಕುಸಿ. ಪೇಟೆ ಸುತ್ತಿರೆ ಆ ತರದ ಕುಸಿ ಆಗುವಾಂಗೆ ಇಲ್ಲೆ. ಬೆಳಿಗ್ಗೆ ಕೊರೆವ ಚಳಿಗೆ ಎದ್ದ್ ಉಪಹಾರ ಮುಗ್ಸಿ ದಾರಿ ಕರ್ಚಿಗೆ ಬುತ್ತಿ ತಕಂಡ್ ಹೊರ್ಟೊ. ಕೈಗೆ

ಒಂದೊಂದು ದೊಣ್ಣೆ ಬಂದಿತ್ತ್. ದೊಣ್ಣೆ ತುಂಬಾ ಅಗತ್ಯ. ರೆಸಾರ್ಟನವು ಮತ್ತು ಅಕ್ಕಪಕ್ಕದ ಕೆಲವೇ ಅಂಗಡಿಯವು ನಮ್ಮ ಇಬ್ಬರ್ ಅಮ್ಮಂದಿರ್ ಸೀರೆ ಉಟ್ಟ್‌ಕಂಡ್ ಹೊರ್ಟದರ ಕಂಡ್ ನೀವ್ ಹೀಂಗೆ ಹೋದರೆ ಆಕಿಲೆ ಚೂಡಿದಾರನೊ, ಸುರಾಲೋ ಹಾಕಿಕಂಡ್ ಹೋದೇ ಒಳ್ಳೆದ್‌ಂತ ಹೇಳ್ದೊ. ಅವರ ಮಾತ್‌ನ ನಾವು ಅಲ್ಲಗಳೆಯದಿದ್ದರೂ ಅಬ್ಯಾಸ ಬಲದ ಮೇಲೆ ನಂಬಿಗೆ ಇಸಿ ಮುಂದುವರ್ದೊ. ಕಾಡ್ ಅಂದರೆ ಬರೀ ಕಾಡ್. ಜನ ಸಂಚಾರ ಬಾರಿ ಅಪ್ರೂಪ. ನಾವ್ಗೆ ದಾರಿಲಿ ಇದಿರಾದೊವು ಅಂದರೆ ಹಕ್ಕಿ ಬೇಟೆಯಾಡುವ ಎರ್ಡ್ ಮಕ್ಕ ಒಬ್ಬಳು ವಿದೇಸಿ ಹೆಂಗ್ಸ್ ಮಾತ್ರ. ದಾರಿ ಉದ್ದಕ್ಕೂ ಕಲ್ಲ್‌ಬಂಡೆ, ಕುರುಚಲು, ಪೊದೆಗ, ಮುಳ್ಳಿನ ಗಿಡ್ಡೆಗ ಕೆಲವು ಕಡೆ ಮರ ಕಾಡುನೂ ಇತ್ತ್. ಅಂಕು ಡೊಂಕಾದ ದಾರಿ ಎಚ್ಚರ ತಪ್ಪಿರೆ ಹಲ್ಲ್, ಮುಸುಂಡ್ ಎಲ್ಲ ಹೊಡಿ ಆದು. ರೆಸಾರ್ಟ್‌ಂದ ಪಾಲದವರೆಗೆ ಎಚ್ಚರಿಕೆಲಿ ಇಳ್ದ್‌ಕಂಡೇ ಹೋಕು. ಸುಮಾರ್ ಒಂದುವರೆ ಸಾವಿರ ಅಡಿ ಕೆಳಗೆ ಇಳ್ದ್ ಐದ್ ಕಿ.ಮೀ. ದೂರ ಹೋಕಾಕನ ಪಾಲ ಸಿಕ್ಕಿದೆ. ಹರಿವ ಹಳ್ಳ, ಅದರ ಎರ್ಡ್ ದಡಗಲ್ಲಿ ಗೋಳಿಮರ. ಅದರ ಬೇರ್ ಯಾ ಬೀಳಲ್‌ಗಳ ಒಂದಕೊಂದು ಸೇರ್ಸಿ ನೆಣ್ದ್ ಪಾಲ ಮಾಡಿಯೊಳೊ ಪಕ್ಕಕ್ಕೆ ಬೀಳದ ಹಾಂಗೆನೂ ನೇಯ್ದೊಳೊ ಅದರ ಮೇಲೆ.

ನಮ್ಮ ದೇಶಲಿ ಅತ್ಯಂತ ಹೆಚ್ಚ್ ಮಳೆ ಬೀಳ್ವ ಪ್ರದೇಶ ಅಂದರೆ ಚಿರಾಪುಂಜಿಂತ ನಾವ್ಗೆ ಗೊತ್ತು. ಅಲ್ಲಿ ವಿಸ್ತಾರದ ಜಾಗಲಿ ಇರುದೆಲ್ಲ ದಟ್ಟ ಕಾಡ್. ಅಲ್ಲಿಗೆ ಹೋಕೆ ಆದುಲೆ. ದೂರಂದ ನೋಡಿ ಬಾಕೆ ಅದೆ. ಅದರ ನೋಡಿಕೆ ಹೋಕಾಕನ ಒಂದು ಕಡೆ ಸುಮಾರ್ ಒಂದುವರೆ ಕಿ.ಮೀ. ದೂರದ ಗುಹೆನ ಒಳಗೆ ತಗ್ಗಿ, ಬಗ್ಗಿ ಕೆಲವು ಕಡೆ ಹರ್ಕಂಡ್ ಹೋಕು. ಬೆಳ್ಕ್‌ನ ವ್ಯವಸ್ತೆ ಮಾಡಿಯೊಳು. ಹಾಂಗಾಗಿ ಹೋಕೆ ಸುಲಬ ಆದೆ. ನಾನ್ ಮತ್ತು ಕಲಮರಡಪ್ಪನವು ಮಾತ್ರ ಅದರೊಳಗೆ ಹೋದೊ. ಅದರ ದಾಟಿ ಮುಂದೆ ಹೋದರೆ ಒಂದು ದೊಡ್ಡ ಮರ ಸಿಕ್ಕಿದೆ. ಆ ಮರಕ್ಕೆ ಅಲ್ಲಲ್ಲಿ ಏಣಿ ಮತ್ತು ಅಟ್ಟಳಿಕೆ ಕಟ್ಟಿಯೊಳೊ ನಮ್ಮ ಮನೆವು ಹಂಞ ಎತ್ತರಕ್ಕೆ ಮಾತ್ರ ಹತ್ತಿದೊ. ನಾವಿಬ್ಬರ್ ಅದರ ಕೊಡಿವರೇಗೆ ಹತ್ತಿ ಅಲ್ಲಿಂದ ಚಿರಾಪುಂಜಿ ಕಾಡಿರುವ ಜಾಗನ ನೋಡ್ದೊ.

ನಾವು ಅಲ್ಲಿಂದ ತಿರ್ಗಿ ಬಾಕಾಕನ ಜಾಗತಿಕ ಆರೋಗ್ಯ ಸಂಸ್ಥೆ (WHO) ಒಪ್ಪಿಕಂಡ 'ಸ್ವಚ್ಛತಾ ಗ್ರಾಮ'ನ ನೋಡಿಕಂಡ್ ಬಂದೊ. ಆ

ಹಳ್ಳಿ ಹೇಂಗಿರುದುಂತ ನೋಡುವ ಆಸಕ್ತಿ ಇತ್ತ್. ಮನೆಗೆ ಎಲ್ಲ ಸಾಮಾನ್ಯ ಮನೆ. ಅಲ್ಲಲ್ಲಿ ಕೆಲವು ತಾರಸಿ ಮನೆಗಳೂ ಇತ್ತ್. ಗ್ರಾಮದ ಕಛೇರಿಗ, ಸಂತೆ ಎಲ್ಲಾ ನಾಜೂಕಾಗಿ ಇತ್ತ್. ಸಂತೆಲಿ ಹಳ್ಳಿಲಿ ಬೆಳ್ಸಿದ ತರಕಾರಿ, ಹಣ್ಣ್‌ಗ ಅಡಿಕೆ, ಎಲೆ ಮಾರಾಟಕ್ಕೆ ಇಸಿದ್ದೊ. ನಾವು ಗಮನಿಸಕ್ಕಾದ ಸಂಗತಿ ಅಂದ್ರೆ ಅಲ್ಲಿ ದಾರಿ, ಬೀದಿ, ಮನೆಗಳ ಹಿಂದೆ ಮುಂದೆ, ಚರಂಡಿ, ಸಂತೆ ಜಾಗ, ಶಾಲಾ ವಠಾರ ಎಲ್ಲಿ ನೋಡಿರೂ ಕಸ, ಕಡ್ಡಿ, ಕೆಸ್ರ್, ಕೊಳ್ಳಾಗಲಿ, ನೋಡಿಕೆ ಸಿಕ್ಕುದುಲೆ. ಜನಗ ಅವರವರ ಕೆಲಸಲಿ ನಿರತರಾಗಿದ್ದೊ ಹಾರಾಟ, ಕೂಗಾಟ ಅಂತೂ ಕೇಳ್ತಿತ್ಲೆ. ಮಾತಾಡ್ಸಿರೆ ಕುಸಿಲಿ ಮಾತಾಡ್‌ತಿದ್ದೊ. ಇದೆಲ್ಲ ನೋಡಿಕಾಕನ ನಾವ್ ನಮ್ಮೂರು ನೆನ್ಸಿಕಂಡೊ.

ನಾವ್ ಅದೇ ದಿನ ಹಿಂಬೊತ್ತಿಗೆ ಕಾಜಿರಂಗ ಎಂಬಲ್ಲಿಗೆ ಹೋಗಿ ಅಲ್ಲಿನ ರೆಸಾರ್ಟ್‌ಲಿ ಉಳ್ಕೊಂಡೊ. ಕಾಜಿರಂಗಲಿರುವ ಕಾಜಿರಂಗ ವನ್ಯದಾಮ ಘೇಂಡಾಮೃಗ ಯಾ ಖಡ್ಗಮೃಗಗಳಿಗೆ ಹೆಸರುವಾಸಿ. ನಾವು ಬೆಳಿಗ್ಗೆ ಬೇಗ ಎದ್ದ್ ಹೋದೊ. ವಿಸ್ತಾರದ ಜಾಗ ಬಹುಮಟ್ಟಿಗೆ ಹೆಚ್ಚಿನ ಪ್ರದೇಶ ಜವುಗು ನೆಲ. ಕೆಸ್ರ್ ಗುಂಡಿಲಿ ಕೋಣ, ಎಮ್ಮೆಗಳ ಹಾಂಗೆ ಪೊಳ್ಳ ಬೀಳುದು ಅಂದರೆ ಖಡ್ಗ ಮೃಗಗಳಿಗೆ ತುಂಬಾ ಕುಸಿ. ಬ್ರಹ್ಮಪುತ್ರ ಹಳ್ಳದ ಒಂದು ಉಪನದಿ ವನ್ಯಧಾಮದ ಪಕ್ಕಲಿ ಹರ್ದದೆ ಹಳ್ಳದ ಪಕ್ಕದ ಮರಗಳ ಮೇಲೆ ಕೊಕ್ಕರೆಗ ಮನೆಮಾಡಿದ್ದೊ. ವನ್ಯ ಧಾಮದ ಪ್ರವೇಶ ದಾರಿಲಿ ಕೊಟ್ಟ ಮಾಹಿತಿ ಪ್ರಕಾರ ಸುಮಾರ್ ಎರ್ಡ್ ಸಾವಿರಕ್ಕೆ ಮೀರಿ ಖಡ್ಗ ಮೃಗಗ ಬಂಗಾಳದ ಹುಲಿಗ ನೂರು ಚದರ ಮೀಟರಗೆ 32.6ರಷ್ಟ್ ಜಿಂಕೆಗ 68 ಏಷ್ಯಾ ಖಂಡದ ಆನೆಗ 124 ಒಳೊ ಅಂತ ಇತ್ತ್. ಈ ವರ್ಷದ ಮಳೆಗೆ ಇಲ್ಲಿ ಪ್ರವಾಹ ಬಂದ್ 300ಕ್ಕಿಂತ ಹೆಚ್ಚಿಗೆ ಖಡ್ಗ ಮೃಗಗ ಸತ್ತ್ ಹೋದೊಂತ ಓದಿ ಬೇಜಾರ್ ಆತ್.

ತಿರ್‍ಗಾಟಕ್ಕೆ ನಮ್ಮ ಕರ್ಕಂಡ್ ಹೋಕೆ ಆನೆಗ ತಯಾರಿದ್ದೊ. ನಾವು ಇಬ್ಬರಿಬ್ಬರ್ ಒಂದೊಂದು ಆನೆ ಮೇಲೆ ಕುದ್ದ್ ಸವಾರಿಗೆ ಹೊರ್‍ಟೊ. ನಾವ್ಗೆ ಸಾಕಷ್ಟ್ ಪ್ರಾಣಿಗ ನೋಡಿಕೆನೂ ಸಿಕ್ಕಿದೊ. ಕೆಲವು ಕಡೆ ಕಾಡ್ ಹಂದಿ ಇತ್ತ್. ಹಾಂಗೆ ಹೋಕಾಕನ ಗುಜರಾತಿನ ಸಾಸನ್‌ಗಿರ್ ನೇಶನಲ್ ಪಾರ್ಕ್‌ಲಿ ಮೋಟಾರ್ ವಾಹನಲಿ ಕುದ್ದ್‌ಕಂಡ್ ಸಿಂಹಗಳ ನೋಡಿಕೆ ಹೋದ್ದೆ ನೆಂಪಾತ್.

ನಾವು ಕಾಜಿರಂಗಂದ ಊಟ ಮುಗ್ಸಿ ದಿರಂಗ್ ಕಡೆ ಹೊರ್ಟ್ವೊ. ಬ್ರಹ್ಮಪುತ್ರ ಹಳ್ಳ ದಾಟಿ ದಿರಂಗ್ ಕಡೆ ನಮ್ಮ ಗಾಡಿ ಓಡ್ತಿತ್ತ್. ಹತ್ತಿ, ಇಳ್ದ್, ಎಡ ಬಲಕ್ಕೆ ತಿರ್ಗಿ ಸಾಗುವ ಬಳಸ್ ದಾರಿ. ದಿರಂಗ್‌ಂದ ತವಾಂಗಿಗೆ ಹೋಗಿ ಮತ್ತೆ ಇಂಡೋ–ಚೀನ ಗಡಿಗೆ ಹೋದು ನಮ್ಮ ಗುರಿ. ಹಾಂಗೆ ಕತ್ತಲಾಗ್ತಿತ್ತ್. ತಿರ್ಗಾಸ್ ದಾರಿ. ನಮ್ಮ ಎದ್ರ್ ಕಡೆಂದ ಬೈಕ್‌ಲಿ ಒಂದು ಗಂಡ್ಸ್ ಹಿಂದೆ ಹೆಂಗ್ಸ್ ಕುದ್ದ್‌ಕಂಡ ಬರುವ ಹಾಂಗೆ ಕಂಡತ್. ನಮ್ಮ ಬಲ ಪಕ್ಕಕ್ಕೆ ಅವರ ಎಡಪಕ್ಕಕ್ಕೆ ಉದ್ದಕ್ಕೂ ಪ್ರಪಾತ ಗುಂಡಿ. ಅಲ್ಲಿ ಒಂದು ಹಳ್ಳನೂ ಹರಿತಿತ್ತ್. ಬೈಕ್ ಸವಾರಂಗೆ ಏನಾತೋ ಗೊತ್ತ್ಲೆ. ಅವರ ಬಲಕ್ಕೆ ಹೋಗಿ ತಿರ್ಗುವ ಬದಲ್ ನೇರಕ್ಕೆ ಬಾತ್. ಬಂದವನೇ ಕಣಿವೆಯಂತ ಓಣಿ ಜಾಗಕ್ಕೆ ಬಿದ್ದದ್ ಕಂಡತ್. ಇಬ್ಬರೂ ಪ್ರಪಾತಕ್ಕೆ ಬಿದ್ದೊಂತಲೇ ಗ್ರಹಿಸಿದೊ. ನಮ್ಮ ಚಾಲಕ ಬಾರೀ ಚಾಲಾಕ್‌ನವ. ನಮ್ಮ ಗಾಡಿನ ಕ್ಷಣಲಿ ನಿಲ್ಸಿ ಹಾರಿ ಹೋಗಿ ಬೈಕ್‌ನ ಹಿಡ್ಕಂಡತ್. ಪುಣ್ಯಕ್ಕೆ ಬೈಕ್ ಓಣಿಲಿದ್ದ ಒಂದು ದೊಡ್ಡ ಕಲ್ಲಿಗೆ ತಾಗಿ ನಿಂತಿತ್. ಕಲ್‌ಮರಡಪ್ಪನವು ಎನ್.ಸಿ.ಸಿ. ಜನ. ಅವು ಹೋಗಿ ನಮ್ಮ ಚಾಲಕನ ಒಂದು ಕೈ ಹಿಡ್‌ಕೊಂಡೊ. ಕೊರೆಯುವ ಚಳಿ ನಾನ್ ಗಾಡಿಂದ ಇಳ್ದೆ. ಆ ಚಳಿಲಿ ನನ್ನ ಕಾಲ್ ನೆಲದ ಮೇಲೆ ಊಟ್ಟೊ ಅಲ್ಲ ಇನ್ನೆಲ್ಲಿ ಊಟ್ಟೊ ಅಂತ ಗೊತ್ತಾತಿಲ್ಲೆ. ಸರಿಯಾಗಿ ನಿಲ್ಲೆಕೆ ಬ್ಯಾಲೆನ್ಸ್ ಸಿಕ್‌ತಿತ್ಲೆ. ಆ ಕಲ್ಲ್ ತಡೆಯದೇ ಇರದಿದ್ರೆ ಅವು ಯಾರ ಕೈಗೂ ಸಿಗುವಾಂಗಿತ್ಲೆ. ಗೂಡೆನ ಕೈ ಹಿಡ್ದ್ ಮೆಲ್ಲ ರೋಡ್‌ಗೆ ಹತ್ಸಿ ಹೈದನ ಮೇಲಕ್ಕೆ ಎಳ್ಕೊಂಡೊ. ಮತ್ತೆ ಎಲ್ಲೊವು ಸೇರಿ ಬೈಕ್‌ನ ಮೇಲ್ಗಡೆ ಎಳ್ದೊ. ನಮ್ಮ ಚಾಲಕನ ಸಾಹಸ ಅಲ್ಲದಿರ್‌ತಿದ್ದರೆ ಆ ಕತ್ತಲೆಲಿ ಏನಾಗ್‌ತಿತ್ತೊ ಏನೋ. ಅಂತ ದಾರಿಲಿ ಆ ರಾತ್ರಿ ಬೆಟ್ಟ, ಗುಡ್ಡ, ದಟ್ಟ ಕಾಡ್‌ನ ನಡುಲಿ ಹೋದೇ ಅಪಾಯ. ಅವು ನವ ದಂಪತಿಗಳ ಹಾಂಗೆ ಇದ್ದೊ. ಅವ್ಕೆ ಪಕ್ಕದ ಹಳ್ಳಿಗೆ ಹೋಕಾಗಿತ್ತ್. ಅವು ಉಪಕಾರ ಸ್ಮರಿಸಿ ಹೊರ್ಟ್ ಹೋದೊ. ನಾವ್ಗೆ ತಡ ಆಗಿತ್ತ್. ನಾವು ದಿರಂಗ್‌ಗೆ ಹೊಗಿ ಉಳ್ಕಂಡೊ ಅಲ್ಲಿನ ಸ್ವಾಗತಕಾರಣಿ ನಮ್ಮ ಕಾಯ್ತಾ ಇತ್ತ್.

ಇಂಡೋಚೀನಾ ಗಡಿಗೆ ಹೋಗೋವು ತವಾಂಗ್ ಎಂಬಲ್ಲಿಗೆ ಹೋಗಿ ಸೇನಾ ಕಛೇರಿಂದ ಅನುಮತಿ ಪತ್ರ ಪಡ್ದ್ ಹೋಕು ತವಾಂಗ್ ಅರುಣಾಚಲ ಪ್ರದೇಶದ ಮುಖ್ಯ ನಗರ ತೇಜ್ ಪುರಂದ ತವಾಂಗ್‌ಗೆ 351 ಕಿ.ಮೀ. ದೂರ ದಿರಂಗ್‌ಂದ ತವಾಂಗ್‌ಗೆ 141 ಕಿ.ಮೀ. ಈ ರಸ್ತೆ ಈಗ

ಮಾಡ್ತಾ ಒಳೊ ಅದ್ 3ನೇ ರಾಷ್ಟ್ರೀಯ ಹೆದ್ದಾರಿ ಗಡಿ ಭದ್ರತಾ ದಳದವೇ (B.S.F.) ಕೆಲ್ಸ ಮಾಡ್ತಿರ್ದು ಇಂಡೋ ಚೀನ ಜಗಳದ ಸಮಯಲಿ ಈ ದಾರಿನೇ ಇತ್ಲೆಗಡ. ಬರೇ ಕಾಲ್‌ದಾರಿ ಆಗಿನ ಪರಿಸ್ತಿತಿ ಹೇಂಗಿತ್ತ್‌ಂತೇಳಿರೆ ನಮ್ಮ ಸೈನಿಕರ ಕಾಲಿಗೆ ಬೂಟ್ಸಾಗಲಿ, ಆ ಚಳಿಂದ ರಗಿಕಣಿಕೆ ಬೇಕಾದ ಉಲ್ಲನ್ ಬಟ್ಟೆ ಬರೆ ಆಗಲಿ ಏನೂ ಸರಿಯಾಗಿ ಇತ್ಲೆ ಗಡ. ಅದು ಹೋಗಲಿ ಜಗಳಕ್ಕೆ ಬೇಕಾದ ಶಸ್ತ್ರಗಾದರೂ ಬೇಕಲ್ಲ, ಅದೂ ಇತ್ಲೆ. ಸಾವಿರ ಸಾವಿರ ಚೀನೀ ಸೈನಿಕರ್ ಆಚೆ ಕಡೆಂದ ಇಳ್ದ್ ಬಾಕಾಕನ ಮೇಜರ್ ಜಸ್ವಂತ ಸಿಂಘ್ ಎಂಬ ಕೇವಲ ನಾಲ್ಕೈದ್ ಸೈನಿಕರ ತನ್ನೊಟ್ಟಿಗೆ ಉಳ್ಸಿಕಂಡ್ ಉಳ್ದ ಬೆಟಾಲಿಯನ್ ಸೈನಿಕರ ಚೀನೀಯರ ಬಾಯಿಗೆ ಕೊಡ್ದು ಬೇಡಂತೇಳಿ ಹಿಂದಕ್ಕೆ ಕಳ್ಸಿ ಕೊಟ್ಟ್ ತಮ್ಮಲ್ಲಿದ್ದ ಗ್ರೇನೇಡ್‌ಗಳ ಸಿಡಿಸಿ ಆದಷ್ಟ್ ವೈರಿಗಳ ಕೊಂದ್ ಅವು ವೀರ ಮರಣ ಹೊಂದಿದ್ ಈಗ ಚರಿತ್ರೆಗೆ ಸೇರಿಟು. ನಮ್ಮ ಸರಕಾರ ಅವಂಗೆ ಮರಣೋತ್ತರ 'ಮಹಾವೀರ ಚಕ್ರ' ಪುರಸ್ಕಾರ ನೀಡಿ ಗೌರವಿಸಿಟು. ಈಗ ಜಸ್ವಂತ್ ಸಿಂಘ್‌ಗೆ ಗುಡಿ ಕಟ್ಟಿ ಯಾಗೋಳು ದೀಪ ಹೊತ್ಸಿ ಸ್ಮರಿಸುತ್ತಾ ಒಳೊ. ನಾವು ತವಾಂಗ್‌ಗೆ ಹೋಗುವ ದಾರಿಲಿ ಅಲ್ಲಿಗೆ ಹೋಗಿ ನಮ್ಮ ನಮನ ಸಲ್ಲಿಸಿಕೆ ಮರ್ತ್‌ಲೆ. ಅದೀಗ ನಮ್ಮ ಸೈನಿಕರ ಸ್ಫೂರ್ತಿಗೆ ನೆಲೆಯಾಗುಟ್ಟು.

ನಾವು ಅಲ್ಲೇ ಒಂದು ಕಡೆ 'ಚಾ' ಕುಡಿಯೊನೊಂತೇಳಿ ಹೋಟೇಲ್ ಹತ್ರ ಹೋದೊ. ನಮ್ಮ ಮನೆವು ಒಳಗೆ ಹೋಗಿದ್ದೊ ಕಲಮರಡಪ್ಪನವು ಚಾಲಕನ ಹುಡ್ಕಿಕಂಡ್ ಕೆಳಗೆ ಹೋಗಿದ್ದೊ. ನಾನ್ ಹೋಟೇಲ್‌ನ ಎದ್ರ್‌ಗಡೆ ನಿತ್ತ್‌ಕಂಡ್ ಇದ್ದೆ ಬೀಸ್‌ತಿದ್ದ. ಚಳಿಗಾಳಿ ಜೋರಾಗುತ್ತಾ ಬಾತ್. ಕೆಲವೇ ಕ್ಷಣ ಮಂಜಿನ ರಾಶಿ ಆ ಪ್ರದೇಶ ಎಲ್ಲ ತುಂಬಿಕಂಡತ್ ಎಲ್ಲಿ ಗಾಳಿ ನನ್ನ ಹಾರ್‍ಸಿಕಂಡ್ ಹೋಗಿಬುಟ್ಟದೆಂತ ಹೆದ್ರಿಕೆನೂ ಆತ್. ಸುತ್ತ ಮುತ್ತ ಕಾಂಬತೇ ಇತ್ಲೆ. ಈಗಲೇ ನಾವು ಸುಮಾರು 11,000 ಅಡಿ ಎತ್ತರಲಿ ಇದ್ದೊ. ಇನ್ನೂ ಗಡಿಗೆ ಹೋಕರೆ ಎರಡ್ ಮೂರು ಸಾವಿರ ಅಡಿ ಹತ್ತಿಕೆ ಇತ್ತ್. ಶೀತಗಾಳಿ ಹೀಂಗೇ ಬೀಸ್‌ತಿದ್ದರೆ ಹೋದು ಹೇಂಗೆತ ಹೆದ್ರಿಕೆನೂ ಆತ್. ನಾನ್ ಹೋಟೇಲ್ ಒಳಗೆ ಓಡ್ದೆ. ಒಳ ಕೋಣೆಲಿ ಅಗ್ಗಿಷ್ಟಿಕೆ ಇತ್ತ್. ನಮ್ಮವು ಅಲ್ಲಿ ಚಳಿ ಕಾಯ್ಸ್‌ತ್ತಾ ಇದ್ದೊ. ಬದ್ಕಿದೆ ಬಡ ಜೀವ ಅಂತ ಅನ್ಸಿತ್. ಬಿಸಿ ಬಿಸಿ ಚಾ ಹೀರ್‌ದೊ. ಜೀವ ಬಂದಾಗಾತ್ ಸ್ವಲ್ಪ ಹೊತ್ತಿಗೆ ಶೀತ ಗಾಳಿ ಕಡಿಮೆ ಆತ್. ಮುಸುಕಿದ

ಮಂಜ್ ತಿಳಿಯಾತ್. ಹಿಮಾಲಯ ಪ್ರದೇಶಲಿ ಹವಾಮಾನ ಚಣ ಚಣಕೆ ಬದಲಾದು ಸಾಮಾನ್ಯ. ನಾವ್ಗೆ ಇದರ ಅನುಭವ ಸಾಕಷ್ಟ್ ಆಗಿತ್ತ್.

ಪ್ರಯಾಣ ಮುಂದುವರಿಸಿದೊ. ದಾರಿ ಬುಟ್ಟ್ ಎರಡೂ ಪಕ್ಕಲಿ ಹಿಮದ ರಾಶಿ. ಒಂದು ಕಡೆ ನಮ್ಮ ಬಲಕ್ಕೆ ಜಲಪಾತ ಇತ್ತ್. ಅದು 'ನುರಾನಂಗ್ ಜಲಪಾತ'. ಪಕ್ಕಲಿ ಹಳ್ಳ ಹರಿತಾ ಇತ್ತ್ ನಾವ್ ಅಲ್ಲಿಗೆ ಹೋದೊ. ತೋರದ ಬಿಳಿ ಬಳ್ಳಿ ಇಳ್ಸಿದ ಹಾಂಗಿತ್ತ್ ನೀರ್ ಮುಟ್ಟಿರೆ ಮೈಯೆಲ್ಲಾ ಮರಗಟ್ಟುವಂತಿತ್ತ್. ಮೇಡಮ್ಮ್ ನೀಲಮ್ಮನವುಕೆ ಮೀಯುವ ಆಸೆ. ಕಲಮರಡಪ್ಪನವು ಮಾತಾಡ್ತ್‌ಲೆ. ನಮ್ಮ ಮನೆವು 'ಅಯ್ಯೋ ಅಯ್ಯೋ ಬೇಡ ಬೇಡ'ಂತೇಳ್ದೊ. 'ನೀವು ಮೀದರೆ ನಮ್ಮ ಪ್ರವಾಸ ಇಲ್ಲಿಗೆ ಮುಗ್ದದೆಂತನಾ ಹೇಳ್ದೊ. ಅಂತೂ ಅಲ್ಲಿಂದ ಹೊರಟ್ ಪ್ರಯಾಣ ಮುಂದುರ್ಸಿದೊ. ಹವಾಮಾನ ಗಳಿಗೆ ಗಳಿಗೆಗೆ ಬದಲಾಗುತ್ತಾ ಇತ್ತ್ ತವಾಂಗಿಗೆ ಹೋಕೆ ಮುಂದೆ ಒಂದು ಕ್ಯಾನ್‌ವಾಸ್ ಶೂ ತಕಣಕೂಂತ ಇದ್ದೆ. ಇಲ್ಲಿವರೇಗೆ ಆಗಿತ್ಲೆ ನನ್ನ ಮತ್ತು ಶೂ ಸಮ್ಮಂದ ಅಷ್ಟಕಷ್ಟೇ ಬದರಿ, ಕೇದಾರ, ಸಿಕ್ಕಿಮ್ಮ್, ಹಿಮಾಚಲ ಪ್ರದೇಶಗಳಿಗೆಲ್ಲ ಚಪ್ಪಲ್ ಹಾಕಿಯೇ ಸುದಾರಿಸಿದ್ದೆ. ಮಡಿಕೇರಿ ಕಾಲೇಜಿಗೆ ಸೇರಿಕಾಕನ ತೆಗ್ದ ಶೂ ಒಂದು ತಿಂಗಳಿಗಿಂತ ಹೆಚ್ಚ್ ಹಾಕಿತ್ಲೆ. ನನ್ನ ಜೀವಮಾನಲಿ ಅದೊಂದೇ ಸರ್ತಿ ಶೂ ತೆಕಂಡದ್ದ್, ಇಲ್ಲಿನೂ ನಂಗೆ ಶೂ ತಕಂಕೆ ಸರಿಗಟ್ಲಾತ್ಲೆ. ಕಾಲಿಗೆ ಕಾಲ್‌ಚೀಲ ಹಾಕಿ ಚಪ್ಪಲಿಲೇ ಹೋದೆ. ಪುಣ್ಯಕ್ಕೆ ಏನೂ ತೊಂದರೆ ಆತ್ಲೆ.

ತವಾಂಗ್ ಮುಟ್ಟಿಕಾಕನ ಕತ್ತಲಾಗಿತ್ತ್. ನಮಗಿಂತ ಒಂದುವರೆ ಗಂಟೆ ಮುಂದೆನೇ ಇಲ್ಲಿ ಕತ್ತಲಾದೆ. ಬೊಳ್ಪು ಕೂಡ ಬೇಗ ಆದು. ನಾವ್ಗೆ ಗೊತ್ತು ಮಾಡ್ದ ಕೋಣೆಗ ಲಾಯ್ಕಿತ್ತ್. ಊಟದ ಶಾಸ್ತ್ರ ಮುಗಿಸಿ ರಝಾಯಿನ ಒಳಗೆ ಸೇರ್ದೊ. ಕೋಣೆ ಬಿಸಿಯಾಗಿಸುವ ವ್ಯವಸ್ತೆನೂ ಇತ್ತ್.

ಹಿಮಾಲಯಲಿ ರಾತ್ರಿ ಇರುವ ಚಳಿ ಬೊಳ್ಪಿಗೆ ಇರುದುಲೆ ಬೊಳ್ಪಿಗೆ ಬೇಗ ಎದ್ದ್ ಅಲ್ಲಿರುವ ಮೊನಾಸ್ಟ್ರಿ ನೋಡಿಕೆ ಹೋದೊ. ತವಾಂಗಿನ ಮೊನಾಸ್ಟ್ರಿ ಏಷ್ಯಾ ಖಂಡಲಿ ಅತ್ಯಂತ ದೊಡ್ಡದ್. ಅಲ್ಲಿರುವ ಮಕ್ಕ ವ್ಯಾಯಾಮ, ಕುಸ್ತಿ, ಹೀಂಗೆ ನಾನಾ ಚಟುವಟಿಗಲ್ಲಿ ನಿರತರಾಗಿದ್ದೊ. ನಾವು ಮೊನಾಸ್ಟ್ರಿ ನೋಡಿಕಂಡ್ ಮಕ್ಕಳ ಮಾತಾಡ್ಸಿ ಹಂಞ ದೂರಲಿರುವ ಸೈನಿಕ ಕಚೇರಿಗೆ ಹೋದೊ.

ಯಾವ್ದೇ ಗಳಿಗೆಲಿ ಹವಾಮಾನ ಬದಲಾಗುವ ಕಾರಣ ಗಡಿ ಜಾಗಕ್ಕೆ

ಹೋಗೋವು. 12 ಗಂಟೆ ಒಳಗೆ ಹೋಕು. ಸೈನಿಕ ಕಚೇರಿಂದ ಒಪ್ಪಿಗೆ ಪತ್ರ ತಕಂಡ್, ಯುದ್ಧ ಸ್ಮಾರಕ ನೋಡಿಕಂಡ್, ಗಾಡಿನ ಬದಲಾಯ್ಸಿ ಗಡಿ ಕಡೆಗೆ ಮುಂದಾದೊ.

ದಾರಿ ಉದ್ದಕ್ಕೂ ಅಲ್ಲಲ್ಲಿ ಚೆಕ್‌ಪೋಸ್ಟ್ ಉಟ್ಟು. ನಾವು ಸುರೂನ ಚೆಕ್ಕ್ ಪೋಸ್ಟ್‌ಲಿ ಇದ್ದೊ. ನಾವು ಕನ್ನಡ ಮಾತಾಡ್ದುರ ಕೇಳಿ ಅಲ್ಲಿದ್ದ ಸೈನಿಕರಲ್ಲಿ ಇಬ್ಬರು ಹತ್ತಿರ ಬಂದ್ ನಾವು ಎಲ್ಲಿಂದ ಬಂದೊವಂತ ವಿಚಾರ್ಸಿದೊ. ಅವರ್‍ಲಿ ಒಬ್ಬ ದಾರಾವಾಡದವ, ಇನ್ನೊಬ್ಬ ಬೆಳಗಾಮ್‌ನವ. ತರಬೇತಿ ಮುಗ್ಸಿ ಇಲ್ಲಿಗೆ ಬಂದಿದ್ದೊ. ಆ ಪ್ರದೇಶಲಿ ಕಾಲ ಕಳಿದುಂತೇಳಿರೆ ಸುಲಬದ ಸಂಗತಿ ಅಲ್ಲ. ಇಬ್ಬರಿಗೂ ಜರ ಬಂದ್ ಕಂಗಾಲಾಗಿದ್ದೊ. ಅವರ ಸುಖ ಕಷ್ಟಗಳ ಒಂದ್ ಗಳಿಗೆಲಿ ಹೇಳಿಕಂಡೊ. ಅವ್ಕೆ ನಮ್ಮ ಕಂಡ್ ಅವರ ಅಪ್ಪ ಅಮ್ಮನ ಕಂಡಾಂಗೆ ಆಗಿತ್ತ್. ಕಾಲ್‌ನೂ ಹಿಡ್ಕೊಂಡೊ. ನಿಮ್ಮ ಅನಾರೋಗ್ಯ ಬೇಗ ವಾಸಿ ಆಗಲಿ. ನೀವು ಮಾಡ್ವ ಅಮೂಲ್ಯ ಸೇವೆ ದೇಶಕ್ಕಾಗಿ, ಪವಿತ್ರ ಕೆಲಸ ದೇವ್ರ್ ನಿಮ್ಗೆ ಒಳ್ಳೆದ್ ಮಾಡಲಿ ಎಲ್ಲವ್ೂ ಹೇಳಿ ಮುಂದೆ ಹೋದೊ.

ಇಂಡೋಚೀನ ಗಡಿವರೇಗೆ ದಾರಿ ಇದ್ದರೂ ಗಡಿಗೆ ಒಂದು ಕಿ.ಮೀ. ದೂರ ಇರಿಕಾಕನ ಗಾಡಿ ನಿಲ್ಲಿಸಿ ಮತ್ತೆ ನಡ್ಕಂಡೇ ಹೋಕು. ಮಂಜುಗೆಡ್ಡೆ ದಾರಿನ ಮುಚ್ಚಿತ್ತ್ ದಶಂಬರ ಜನವರಿಲೆಲ್ಲ ಎಲ್ಲಾ ಪ್ರದೇಶ ಹಿಮ ಮುಚ್ಚಿದ್ದದೆ. ಈಗಳೂ ಪರ್ವತದ ಮೇಲಿನ ಅರ್ಧ ಭಾಗ ಹಿಮ ತುಂಬಿತ್ತ್. ಕೆರೆನ ನೀರೆಲ್ಲ ಹೆಪ್ಪು ಗಟ್ಟಿತ್ತ್ ನಮ್ಮ ಕಂಡ್ ನಾಲ್ಕೈದ್ ಸೈನಿಕರ್ ಬಂದೊ. ನಾವ್ ಅಲ್ಲದೆ ಬೇರಾರೂ ಪ್ರವಾಸಿಗರ್ ಇತ್ಲೆ. ಇಲ್ಲಿಗೆ ಪ್ರವಾಸಿಗರ್ ಬಾದೇ ಅಪ್ರೂಪ ಗಡ ಈಗನ ಉಷ್ಣತೆ ಹೆಚ್ಚ್ ಕಡಿಮೆ ಮೂರು ಡಿಗ್ರಿ ಉಟ್ಟು. ಇನ್ ಕೆಲವು ದಿನಲಿ ಸೊನ್ನೆಗಿಂತ ತುಂಬಾ ಕಡಿಮೆ ಆದೆಂತ ಹೇಳ್ದೊ. ನಾವೀಗ ಸುಮಾರ್ 14,000 ಅಡಿ ಎತ್ತರಲಿ ಇದ್ದೊ.

ಸೈನಿಕರ್ ಗೌರವಂದ ಬಾರೀ ಲಾಯ್ಕಾಗಿ ಮಾತಾಡ್ಸಿದೊ. ನಮ್ಮ ಎದ್‌ರ್ ಕಡೆ ಗಡಿಕಲ್ಲ್ ಇತ್ತ್. ದೂರಲಿ ಒಂದು ಕಡೆ ಚೀನಾದವರ ಕಾವಲ್‌ಗೋಪುರ ಇತ್ತ್. ಎಡಗಡೆ ಭೂತಾನ ದೇಶದವರ್‍ದ್ ಇತ್ತ್. ದೂರದರ್ಶಕ ಉಪಕರಣನ ತಂದ್ ಅದರ ಮೂಲಕನೂ ನಾವ್ಗೆಲ್ಲ ತೋರ್‍ಸಿ ಎಲ್ಲ ಮಾಹಿತಿಗಳ ಜೊತೆಗೆ ಹಿಂದೆ ನಡೆದ ಯುದ್ಧಗಳ ಬಗ್ಗೆ

ಸಹ ತಿಳ್ಸಿದೊ. ತಿಂಗಳಾನುಗಟ್ಲೆ ಆ ಬಂಡೆಕಲ್ಲು ಹಿಮಾವೃತ ಪ್ರದೇಶಲಿ ಇದ್ದ್‌ಕಂಡ್ ಹಸ್ರ್ ಕಾಣದ ಈ ಜಾಗಕ್ಕೆ ಯಾರಾದರ್ ಭಾರತೀಯ ಪ್ರವಾಸಿಗರ್ ಬಂದರೆ ಅವ್ಕೆ ಬಾರಿ ಕುಸಿ. ನಮ್ಮನ ಅವು ಅವರ ಕಚೇರಿಗೆ ಕರ್ಕಂಡ್ ಹೋಗಿ ಬಿಸಿ ಬಿಸಿ ತಿಂಡಿ ಚಾ ಕೊಟ್ಟ್ ಸತ್ಕರಿಸಿದೊ. ನನ್ನ ಶ್ರೀಮತಿ ಮನೆಂದ ಬಾಕಕನ ದಾರಿ ಖರ್ಚಿಗೆ ಇರ್ಲಿಂತೇಳಿ ನೇಂದ್ರ ಬಾಳೆಹಣ್ಣ್‌ನ ಹಲ್ವ ಮಾಡಿ ತಂದಿತ್ತ್. ಅದ್ರಲ್ಲಿ ಹಂಞ ಇಲ್ಲಿಗೆ ಬಾಕನೂ ಹಿಡ್ಕಂಡಿತ್ತ್. ಅದರ ಅವ್ಕೆ ಕೊಟ್ಟಿತ್ತ್. ತಿಂದ್ ರುಚಿ ನೋಡಿ ತುಂಬಾ ಕುಸಿ ಪಟ್ಟೊ. ಅದನ್ನ್ ತಾಜಾ ತುಪ್ಪಂದ ಮಾಡಿದ್ದೊ.

ನಾವು ಸಾಕಷ್ಟ್ ಹೊತ್ತು ಅಲ್ಲಿ ಕಳ್ದೊ. ನಾವ್ ಬಂದ ಆ ಕಣಿವೆಗೆ 'ಶ್ರೀಲಾಪಾಸ್'ಂತ ಹೆಸ್ರ್. ಇದ್ದಕ್ಕಿದಾಂಗೆ ಚಳಿಗಾಳಿ ಬೀಸಿಕೆ ಸುರ್ ಆತ್. ದಟ್ಟ ಮಂಜು ಓಡೋಡಿ ಬಂದ್ ಪರ್ವತ ಕಣಿವೆ ಎಲ್ಲಾ ಮುಚ್ಚಿತ್. ಮಂಜಿನ ಗಟ್ಟಿ ಬಿಡ್ಸಿದ ಹತ್ತಿನ ಹಾಂಗೆ ಮೇಲಿಂದ ಕೆಳಗೆ ಬೀಳಿಕೆ ಸುರುನೂ ಆತ್. ಅದ್ ನೋಡಿಕೆ ಬಾರಿ ಪೊರ್ಲು. ನಾವ್ ನೋಡಿಕೆ ಆಸೆಪಟ್ಟಿದ್ದ ಅಪ್ರೂಪದ ನೋಟ ಅದ್. ಇನ್ನ್ ಅಲ್ಲಿರುದು ಅಪಾಯಂತೇಳಿ ಅವ್ಕೆಲ್ಲ ಒಳ್ಳೆದನ್ನೆ ಹಾರೈಸಿ ಮರಳಿ ಬರುವ ದಾರಿ ಹಿಡ್ದೊ.

ತಿರ್ಗಿ ಬಾಕಾಕನ ಮಾದುರಿಲೇಕ್ ಎಂಬಲ್ಲಿಗೆ ಹೋಗಿ ಬರದಿದ್ದರೆ ಹೇಂಗೆಂತೇಳಿ ಅಲ್ಲಿಗೆ ಹೋದೊ. ತುಂಬಾ ಬಳಸು ದಾರಿ. ಒಂದು ಚೂರು ಕಣ್ ತಪ್ಪಿರೆ ಪ್ರಪಾತಕ್ಕೆ ಏರ್ ದಾರಿಲಿ ಹೋಗಿ ಮತ್ತೆ ಇಳಿಜಾರಿಲಿ ಹೋಕು. ಮಾದುರಿಲೇಕ್ ತುಂಬಾ ಪೊರ್ಲುನ ಜಾಗ. ಸುತ್ತ ಮಂಜು ಮುಸುಕಿದ ಪರ್ವತ. ನಡೂಲಿ ಸಮತಟ್ಟ್ ಅಲ್ಲೊಂದು ದೊಡ್ಡ ಕೆರೆ. ನೀರೆಲ್ಲ ಹೆಪ್ಪುಗಟ್ಟಿತ್ತ್. ಊಟದ ತಟ್ಟೆನ ಹಾಂಗಿರುವ ಜಾಗ. ಇಲ್ಲಿ ನಮ್ಮ ಸೈನಿಕರ ವಾಸಸ್ತಾನನೂ ಉಟ್ಟು. ನಡುಕ ಹುಟ್ಟಿಸುವ ಚಳಿ. ಉಷ್ಣತೆ –5 ಡಿಗ್ರಿ ಅಂತ ಹೇಳ್ದೊ ಯಾವ್ದೋ ಒಂದು ಸಿನಿಮಾಕ್ಕೆ ಮಾಧೂರಿ ದೀಕ್ಷಿತ್ ಇಲ್ಲಿ ನೃತ್ಯ ಮಾಡ್ದ ಮೇಲೆ 'ಮಾಧುರಿಲೇಕ್'ಂತ ಹೆಸ್ರ್ ಬಂದದ್. ಸ್ಥಳೀಯ ಬಾಸೆಲಿ ಅದಕ್ಕೆ 'ಸಂಗೇಟ್ಸರ್ ಸರೋವರ' ಅಂತ ಹೆಸ್ರ್. ನಾವ್ ತಿರ್ಗಿ ತವಾಂಗ್‌ಗೆ ಬಾಕಾಕನ ಕತ್ತಲಾಗಿತ್ತ್.

ತವಾಂಗ್‌ಂದ ಒಂದೇ ದಿನ ತೇಜ್‌ಪುರಕ್ಕೆ ಹೋದು ಕಷ್ಟದ ಪ್ರಯಾಣ. ಹಾಂಗಾಗಿ ದಿರಂಗ್‌ಲಿ ಒಂದು ರಾತ್ರಿ ಕಳೆಯಕಾಗಿತ್ತ್. ನಾವ್ ಬಾಕಾಕನ ಉಳ್ಕಂಡ ವಸತಿ ಗ್ರಹಲೇ ಈ ಸರ್ತಿನೂ ಉಳ್ಕೊಂಡೊ. ಇಲ್ಲಿಂದ ಹಂಜ ದೂರಲಿರುವ ಒಂದು ಹಳ್ಳಿನ ಮೈದಾನಕ್ಕೆ ಹೋದರೆ

ಕೃಷ್ಣ ಮೃಗ ನೋಡಿಕೆ ಸಿಕ್ಕೆದೆಂತ ಚಾಲಕ ಹೇಳ್ತ್. ಹಾಂಗೆ ಹೋದೊ ದಾರಿಲಿ ಒಂದು ಪ್ರೌಢಶಾಲೆ ಇತ್ತ್. ಹೊರ್ಗಡೆ ಪ್ರಾರ್ಥನೆ ಮಾಡ್ತಾ ಇದ್ದೊ. ನಾವ್ ಹಂಞ ಹೊತ್ತು ನಿಂತ್ ಮತ್ತೆ ಮಕ್ಕಳ ಮಾಸ್ಟರ್‌ಗಳ ಮಾತಾಡ್ಸಿ ಅಲ್ಲಿ ಶಿಕ್ಷಣ ವಿಚಾರ ಮಾತಾಡಿ ಮುಂದೆ ಹೋದೊ. ಆದರೆ ನಾವ್ಗೆ ಕೃಷ್ಣ ಮೃಗ ನೋಡಿಕೆ ಸಿಕ್ಕಿತ್ಲೆ.

ಬರುವ ದಾರಿ ಪಕ್ಕಲಿ ಮನೆ ಹೆಂಗ್ಸ್‌ರ್ ಮನೆ ಮುಂದೆ ಅಂಗಳಲಿ ಜೋಳ ಕೂಂಬೆ ರಾಶಿ ಹಾಕಿ ಬಿಡಿಸ್ತಾ ಇದ್ದೊ. ಅದರ್‍ಲಿ ಕೆಂಪು ಜೋಳನೂ ಇತ್ತ್. ನಮ್ಮವಳಿಗೆ ಒಂದು ಕೂಂಬೆ ತಕಂಡ್ ಊರಿಗೆ ಹೋಗಿ ಬೀಜ ಬಿತ್ತ್ ಹಾಕಿ ದೈ ಮಾಡಿ ನಡಕೂಂತ ಆಸೆ ಆತ್. ಹಾಂಗೆ ಒಂದು ಕೂಂಬೆ ಕೊಡಿ ಅಂತ ಕೇಳ್ತ್. ಅವ್ಳ್ ನಗಾಡಿ ಎರ್ಡ್ ಕೂಂಬೆ ಕೊಟ್ಟಿತ್ತ್. ಅವು ಶ್ರೀಮಂತ ರೈತರಲ್ಲಂತ ನೋಡ್‌ಕನೇ ಗೊತ್ತಾಗ್‌ತಿತ್ತ್. ಅವರ ಶ್ರಮಕ್ಕೆ ಬೆಲೆ ಕಟ್ಟುದಾದರೂ ಹೇಂಗೆ? ನಾನ್ ಅವ್ಳಿಗೆ ಐವತ್ತು ರೂಪಾಯಿ ಕೊಡಿಕೆ ಹೋದೆ. ಅವ್ಳ್ ಬೇಡಂತೇಳ್ತ್. ನಾನ್ ಒತ್ತಾಯ ಮಾಡಿರೂ ತಕಣ್ತ್‌ಲೆ. ಅವಳ ಹೃದಯ ಸಿರಿವಂತಿಕೆಗೆ ತಲೆಬಾಗಿ ಅಲ್ಲಿಂದ ಹಿಂದೆ ಬಂದೊ.

ದಿರಂಗ್‌ಲಿ ಹಿಂದಿನ ಸರ್ತಿ ಉಳ್ಕಂಡ ವಸತಿ ಗೃಹಲೇ ಈ ಸರ್ತಿನೂ ಉಳ್ಕೊಂಡೊ. ಮೇನೇಜರ್ ಹೆಂಗ್ಸ್‌ಗೆ ನಮ್ಮ ಪರಿಚಯ ಲಾಯಕ್ಕಾಗಿತ್ತ್. ನಮ್ಮ ಮನೆವರೊಟ್ಟಿಗೆ ಅದ್ ಇದ್ ಮಾತಾಡ್ತಾ ತನ್ನ ಸುಖ ಕಷ್ಟಗಳನ್ನು ಹಂಚಿ ಕಣ್ತ್. ಅವ್ಳ್ ತುಂಬಾ ಕಷ್ಟಲಿ ಓದಿ ಪದವಿ ಪಡ್ದ್ ಇಲ್ಲಿ ಕೆಲ್ಸಕ್ಕೆ ಸೇರಿತ್ತ್. ನಾವ್ ಒಮ್ಮೆ ಭೂತಾನ್‌ಗೆ ಹೋಗಿರಿಕಾಕನ 'ಪಾರೊ' ಎಂಬಲ್ಲಿ ಒಮ್ಮೆ ಹೋಕಾಕನ ಮತ್ತೆ ತಿರ್‍ಗಿ ಬಾಕಾಕನ ಒಂದೇ ವಸತಿ ಗೃಹಲಿ ಉಳ್ಕಂಡ್ ಸ್ವಲ್ಪ ದೂರಲಿದ್ದ ಒಂದೇ ಹೋಟೇಲಿಗೆ ಊಟ, ಕಾಫಿ, ತಿಂಡಿಗೆ ಹೋಗ್‌ತಿದ್ದೊ. ಅಲ್ಲಿನ ವಸತಿ ಗೃಹಗಾಗಲಿ ಉಪಹಾರ ಗೃಹ ಆಗಲಿ ನಮ್ಮಲ್ಲಿನ ಹಾಂಗೆ ಜನರಾಶಿ ಇರುದುಲೆ, ಉಪಹಾರೆ ಮಂದಿರಲಿ ನಾವು ಹೋಗಿ ನಾವ್ಗೇನ್ ಬೇಕೂಂತ ಹೇಳ್ದ ಮೇಲೆ ಅವು ತಯಾರಿ ಮಾಡಿ ಕೊಡ್ದು. ಹಾಂಗಾಗಿ ಮಾತಾಡಿಕೆ ಸುತ್ತ ಮುತ್ತ ತಿರ್‍ಗಾಡಿಕೆ ಸಾಕಷ್ಟ್ ಸಮಯ ಸಿಕ್ಕಿದೆ. ಹಿಮಾಲಯದ ರಾಜ್ಯಗಳ ಹೆಚ್ಚಿನ ಕಡೆ ಇರುವ ಹಾಂಗೆ ಇಲ್ಲಿ ಕೂಡ ಪರಿಚಾರಕಿಯರ್ ವ್ಯವಸ್ತಾಪಕಿ ಎಲ್ಲ ಹೆಂಗ್ಸ್‌ರೇ ಆಗಿದ್ದೊ. ನಮ್ಮ ಮನೆವು ಇಲ್ಲಿನ ವ್ಯವಸ್ತಾಪಕಿಯೊಟ್ಟಿಗೆ ಮಾತಾಡ್ತಾ ಇರಿಕಾಕನ ಅವರ ಉಡುಗೆ ತೊಡುಗೆ ಬಗ್ಗೆ ಮಾತ್ ಬಾತ್. ಅವ್ಳ್ ನನ್ನ ಶ್ರೀಮತಿನ ಅವಳ ಕೋಣೆಗೆ ಕರ್ಕಂಡ್ ಹೋಗಿ ಅವ್ಳ ಉಡುಗೆ

ತೊಡುಗೆ ತೊಡ್ಸಿ ಕರ್ಕಂಡ್ ಬಂದ್ ಕುಸಿ ಪಟ್ಟತ್. ನಮ್ಮವು ಅಲ್ಲಿನ ಅಡ್ಗೆ ಕೋಣೆಗೂ ಹೋಗಿ ಸಾಂಬಾರ್, ರಸಮ್ ಪಾಕಮಾಡಿ ಅವ್ಕೆ ಹೇಳಿಕೊಟ್ಟೊ. ಅಷ್ಟಾಕನ ನಮ್ಮೊಟ್ಟಿಗೆ ಇದ್ದ ಆರಾಧ್ಯ ದಂಪತಿಗಳಿಗೂ ಅವರ ಸ್ನೇಹಿತರಿಗೂ ಉಪ್ಪಿಟ್ಟ್ ತಿಂಬಕೆ ಆಸೆ ಆತ್. ಆದ್ರೆ ಅವ್ಕೆ ಉಪ್ಪಿಟ್ಟ್ ಅಂದರೆ ಏನ್‌ಂತ ಗೊತ್ತಿಲ್ಲೆ. ಮತ್ತೆ ಮಾಡ್ದಾದರೂ ಹೇಂಗೆಂತ ಗೊತ್ತಾದು ಎಲ್ಲಿಂದ. ಇವು ಅದ್ಕೆ ಬೇಕಾದ ಸಾಮಾನಿನ ಪಟ್ಟಿ ಕೊಟ್ಟ್ ರವೆನ ಇವೇ ಅಂಗಡಿಗೆ ಹೋಗಿ ತಂದ್ ಕೊಟ್ಟ್ ನಾಳೆ ಬೆಳಗಾತ ಬಂದವೇಂತ ತಿಳ್ಸಿದೊ. ಮರುದಿನ ಪಾಕ ಏನೋ ಆತ್. ಆದರೆ ಉಪ್ಪಿಟ್ಟ್ ಆತ್ಲೆ. ಅದ್ ರವೆ ಮುದ್ದೆನೊ, ಪಾಯ್ಸನೋ ಏನೋ ಒಂದು ಆಗಿತ್ತ್. ಅದ್ ಬುಡಿ ಸರಿಯಾಗಿ ಬೇಯಕೋ ಅದೂ ಆತ್ಲೆ. ಅಂತೂ ತಿಂದ್ ಹೊಟ್ಟೆ ಹಾಳ್ ಮಾಡಿಕಂಡದೇ ಬಾತ್.

ನಾವ್ ಮರಳಿ ಬರುವ ದಾರಿಲಿ ದಿರಂಗ್‌ಂದ ಹೊರ್ಟದ್ ತೇಜಪುರಕ್ಕೆ. ಬರ್ತಾ ಇರಿಕಾಕನ ಒಂದು ಕಡೆ ದಾರಿಲಿ ನಾಲ್ಕೈದ್ ಜನ ಗಾಬ್ರಿಲಿ ಆಚೀಚೆ ಓಡಾಡ್ತಿದ್ದೊ. ಒಂದು ಕ್ರೇನ್‌ನೂ ಇತ್ತ್. ಗಾಡಿ ನಿಲ್ಸಿ ಸಂಗ್ತಿ ಏನ್‌ತ ವಿಚಾರಿಸಿದೊ. ಅಲ್ಲಿ ಹಿಂದಿನ ರಾತ್ರಿ ಮಿನಿ ಲಾರಿ ಒಂದು ಹಳ್ಳಕ್ಕೆ ಬಿದ್ದ್ ಇಬ್ಬರು ಅಲ್ಲೆ ತೀರಿಹೋಗಿದ್ದೊ. ಈಗ ಗಾಡಿನ ಮೇಲೆ ಎತ್ತಿಕೆ ಪ್ರಯತ್ನ ಮಾಡ್ತಿರುದುಂತ ಹೇಳ್ದೊ. ಆ ಜಾಗ ಬೈಕ್ ಬಿದ್ದ ಜಾಗೆಂದ ಹಂಞ ಮುಂದೆ ಇತ್ತ್. ನಾವ್ ಏನೂ ಮಾಡುವಾಂಗಿತ್ಲೆ ಹೊತ್ತು ಮಾಡಿರೆ ಕತ್ತಲೆನೂ ಆಗುವಾಂಗಿತ್ತ್. ನಾವು ತೇಜ್‌ಪುರಕ್ಕೆ ಬಂದೊ.

ತೇಜ್‌ಪುರ ಅಸ್ಸಾಮು ರಾಜ್ಯಲಿ ಬ್ರಹ್ಮಪುತ್ರ ಹಳ್ಳದ ಎಡದಂಡೆಲಿರುವ ನಗರ. ಒಂದು ಒಳ್ಳೆ ವಸತಿ ಗೃಹಲಿ ಕೋಣೆ ವ್ಯವಸ್ತೆ ಆಗಿತ್ತ್. ನಾವೀಗ ಪ್ರವಾಸದ ಕೊನೆಯ ಹಂತಕ್ಕೆ ಬಂದಿದ್ದೊ. ನೋಡ್ದ ಪ್ರದೇಶಗಳ ಸುಂದರ ಚಿತ್ರ ಕಣ್ಣ್ ಮುಂದೆ ಕುಣಿತಿತ್ತ್. ನಾವ್ಗೆ ತುಂಬಾ ಕುಸಿ ತಂದ ಪ್ರವಾಸಗಳ್ಲಿ ಇದೂ ಒಂದು. ಪ್ರಕೃತಿಯ ದಿವ್ಯ ರೂಪ ಸೌಂದರ್ಯ ಸವಿಯೊಕುಂತಾದರೆ ಹಿಮಾಲಯದ ರಾಜ್ಯಗಳಿಗೆ ಹೋಕು. ನಮ್ಮ ಭೂಮಿ ತಾಯಿಯ ಸಿರಿತನ ಮಲೆನಾಡಿಲಿ ಒಂದು ತರ ಬಯಲ್ ಸೀಮೆಲಿ ಇನ್ನೊಂದು ತರ. ಕರಾವಳಿಲಿ ಮತ್ತೊಂದು ತರ. ಹಿಮಾಲಯ ಪ್ರದೇಶಗಳ ಬೆಟ್ಟ, ಗುಡ್ಡ, ಪರ್ವತ, ಕಣಿವೆ, ಗಿಡ, ಮರ, ಮೋಡ, ಮಂಜು ನೂರಾರ್ ಜಲಪಾತಗ, ನಾನಾ ತರದ ಹೂಗಳ ರಾಶಿ, ಹಣ್ಣು ಹಂಪಲು, ಮನ ತುಂಬುವ ನೋಟ ಕಣ್ಣ್‌ಗಳಿಗೆ ಹಬ್ಬದೂಟ ಜೀವಕ್ಕೆ

ಹೊಸ ಚೈತನ್ಯ, ಸ್ಫೂರ್ತಿ.

ನನ್ನಲ್ಲಿ 'Illustrated Guide to India' ಎಂದ ಪುಸ್ತಕ ಉಟ್ಟು. ಅದ್ ರೀಡರ್ಸ್ ಡೈಜೆಸ್ಟ್‌ನವರದ್ದು. ಅದರ್ಲಿ ರಾಜ್ಯ ರಾಜ್ಯಗಳ ಎಲ್ಲಾ ವಿವರ ಉಟ್ಟು. ನಾನ್ ಪ್ರವಾಸಿ ಇಲಾಖಾ ಕಚೇರಿಗಳಿಂದಲೂ ಬೇಕಾದ ಮಾಹಿತಿ ತರಿಸಿದ್ದೆ. ಪ್ರವಾಸ ಹೋಗಿರಿಕಾಕನೂ ಬೇಕಾದ ಪುಸ್ತಕಗಳನ್ನೂ ಸಂಗ್ರಹಿಸಿದ್ದೆ. ನಮ್ಮ ಸ್ನೇಹಿತರಿಗೆ ಈ ವಿಚಾರ ಗೊತ್ತಿತ್ಲೆ. ಈ ಪ್ರವಾಸನ ನಂಗೆ ತಿಳ್ಸಿಕೆ ಮುಂದೆನೇ ವ್ಯವಸ್ಥೆ ಮಾಡಿದ್ದೊ ತೇಜ್‌ಪುರದ ವಸತಿ ಕೋಣೆಲಿ ಕುದ್ದ್‌ಕಂಡ್ ಪ್ರವಾಸದ ಸಿಂಹಾವಲೋಕನ ಮಾಡಿಕಾಕನ ನೀವು ಮುಂದಾಗಿ ಈ ಪ್ರವಾಸ ವಿಚಾರ ಹೇಳ್ತಿದ್ರೆ ನಾಲ್ಕ್‌ದಿನ ಹೆಚ್ಚಿಗೆ ಆದರೂ ತೊಂದರೆ ಇತ್ಲೆ ಇನ್ನೂ ಕೆಲವು ಪ್ರದೇಶ ನೋಡಕಾಗಿತ್ತ್‌ಂತ ಹೇಳ್ದೆ. ನಾನ್ ಯಾಗೋಳು ಪ್ರವಾಸ ಹೋಕೆ ಮುಂದೆ ನಾವು ಹೋಗುವ ಸ್ಥಳಗಳ ದಾರಿ ಅಲ್ಲಿನ ವಿಶೇಷತೆಗಳ ಬಗ್ಗೆ ಓದಿ ತಿಳ್ಕಂಬತಿದ್ದೆ. ಸುಮ್ಮಂಗೆ ಎದ್ದ್ ಹೋದುಂತೇಳಿರೆ ಕುರುಡನ ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಬುಟ್ಟಾಂಗೆ ಆದೆ.

ತೇಜ್‌ಪುರಂದ ಬೆಳಿಗ್ಗೆ ಹೊರ್ಟ್ ಬ್ರಹ್ಮಪುತ್ರಾ ನದಿನ ದಾಟಿ ಗೌಹಾತಿಗೆ ಮುಟ್ಟ್‌ಕಾಕನ ಗಂಟೆ ಒಂದಾಗಿತ್ತ್. ಮೂರು ಗಂಟೆ ಮೇಲೆ ಬೆಂಗಳೂರಿಗೆ ವಿಮಾನ. ಕಲಮರಡಪ್ಪನವು ನಮಗಿಂತ ಒಂದು ಗಂಟೆ ಮುಂದೆ ಹೊರ್ಟೊ. ನಮ್ಮ ವಿಮಾನ ನಾಲ್ಕ್ ಗಂಟೆಗೆ ಹೊರ್ಟತ್. ಅದ್ ಹೈದರಾಬಾದ್ ಚೆನ್ನೈಗಾಗಿ ಸುತ್ತು ಹಾಕಿ ಬಂದ ಕಾರಣ ನಿಲ್ದಾಣಲಿ ಇಳಿಯಕಾಕನ 7 ಗಂಟೆ ಆಗಿತ್ತ್. ನಮ್ಮ ಮೈದುನ ಕುಂಜಿಲನ ನಂದಕುಮಾರ ದಂಪತಿಗ ಕಾಯ್ತಾ ಇದ್ದೊ. ಆ ದಿನ ಅವರಲ್ಲಿ ಉಳ್ಕಂಡ್ ದಶಂಬರ ತಿಂಗಳ ತಾರೀಕು 8ರಂದ್ ಮನೆ ಸೇರ್ದೊ. ತುಂಬಾ ದಿನಗಳ ಕನ್ಸ್ ನೆನ್ಸಾಗಿತ್ತ್.

**ಕುಯಿಂತೋಡು ದಾಮೋದರ**
ಚೆಂಬು ಗ್ರಾಮ
ಮೊ : 9901315963

ಮುಖಪುಟ ಚಿತ್ರದ ಪರಿಚಯ

# ಬೋಗುಣಿ

ತೆಕ್ಕಡ. ಬಿ. ಕುಮಾರಸ್ವಾಮಿ

ಎಂತ ಮಾರಾಯ ನಿನ್ನ ತಲೆ ಬೋಗುಣಿ ತರ ಉಟ್ಟು. ಹಿಂಗೆ ಹೇಳ್ದು ತಲೆಕೂದಲ್ ಉದುರಿ ತಲೆ ಒಳ್ಳ ಬಾಂಡ್ಲಿ ತರ ಇದ್ದದೆ ಅದಿಕೆ. ಹಿಂದೆಲ್ಲಾ ತುಂಬಾ ವಯಸ್ಸಾದ ಮೇಲೆ ತಲೆ ಕೂದಲ್ ಹಣ್ಣಾಗಿ ಉದುರಿ ಹೋತಿತ್ತ್. ಈಗೆಲ್ಲಾ ಸಣ್ಣದರ್ಲೆ ಕೂದಲ್ ಎಲ್ಲಾ ಹಣ್ಣಾದ್, ಉದುರಿ ಹೋಕೆ ಸುರು ಆದೆ. ಇದ್‌ಕೆಲ್ಲಾ ಕಾರಣ ನಾವು ಈಗ ತಿಂಬ ತಿನಿಸ್ ಪದ್ಧತಿ, ಇಲ್ಲೆ ತಲೆಗೆ ಹಾಕ್‌ತಿರುವ  ಸೋಪ್, ಶ್ಯಾಂಪೊ ಬೇರೆ ಬೇರೆ ತರದ ಪ್ಯಾರಚೂಟ್, ಡಾಬರ್ ಹಿಂಗೆ ಏನೇನೊ ಎಣ್ಣೆ. ಹಿಂದೆಲ್ಲಾ ಹಂಗೆ ಇತ್ತ್‌ಲೆ ಒಂದು ಕ್ವಾಟ್ರ್ ಕುಪ್ಪಿಲಿ, ಮಾಪಿಳ್ಳೆ ಅಂಗ್‌ಡಿಂದ ಟಿನ್ನ್‌ಂದ ತುಂಬುಸಿ ಕೊಟ್ಟ ತೆಂಗನಕಾಯಿದ್ ಬಿಳಿಎಣ್ಣೆ ನೋಡಿ. ನಮ್ಮ ಬದ್‌ಕನ ಕ್ರಮ ಹೆಂಗೆಲ್ಲಾ ಬದ್‌ಲಾಗುಟ್ಟು, ಹಂಗೆನೆ ನಮ್ಮ ತಡಿಸನ ಬೇರೆ ಕಡೆ ಜಾರಿಟು. ಏನೇ ಆದರೂ ತಲೆ ಬೋಳುಮಂಡೆ ಆದರೆ ಚಾಣೆತ ತಮಾಸಿಗೋ, ಹಿಯಾಳಿಸಿನೋ, ಸಿಟ್ಟಂದೋ ಕರ್ದವೆ. ಹಿಂಗೆ ತಮಾಸಿಂದ ಹತ್ರದ ದೋಸ್ತಿ ಆದರೆ ಅಂತವನ ತಲೆ ಮೇಲೆ ಕೈ ಪೂಜಿ "ಒಳ್ಳ ದುಡ್ಡು ಮಡ್ಗಿಯೊಳ" ಕಂಡದರೆ ತೇಳುವೆ. ಚಾಣೆ ತಲೆವು ಕಾಯಿತ್ತಿರುವ ಬಿಸ್‌ಲ್‌ಲಿ ನಿಂತ್‌ಕಂಡ್ ಇದ್ದರೆ ಅವರ ತಲೆ ಕನ್ನಡಿತರ ಫಳಫಳ ಹೊಳ್ಪಿದೆ. ಅಂವನ ನೋಡಿ ಜನ ಎಂತರ ಇಂವನ ತಲೆ ಒಳ್ಳ ಓಡು ತರ ಕಾದುಟ್ಟು, ಮೊಟ್ಟೆ ಹೊಯ್ದರೆ ಒಳ್ಳ ಆಮ್ಲೆಟ್ಟ್ ಅದೆತಾ ಹೇಳುವೆ.



ಹಿಂದೆ ನಮ್ಮ ಅಪ್ಪನ ಚಾಣೆತ ಕರೆತಿದ್ದೂ ತಮಾಸಿಗೆ ಇರ್ದು, ಹಂಗಿಸಿನೂ ಇರ್ದು ಆದರೆ ನಂಗೆ ಮಾತ್ರ ಮನ್ಸ್‌ಗೆ ಕಸಕತ್ತ ಆತಿತ್ತ್. ನೋಡಿ ಇಂದ್ ನನ್ನ ಕಣ್ಣ್ ಮುಂದೆ ಅಂತವರ್ದ ಬಾಹಳಷ್ಟ್ ಜನರ್ದ್ ಚಾಣೆ ಹೋಗುಟ್ಟು ತೊಪ್ಪಿ ಹಾಕಂಡ್ ತಿರ್ಗಾಡ್‌ವೆ. ಬಿಸ್‌ಲಿಗೆ ತಲೆ ಬೆಗ್‌ರ್‌ಕನ ತೊಪ್ಪಿ ತೆಗ್ದ್ ತಲೆ ಪೊಜಿ ಪ್ಯಾಂಟಿಗೆ ತಿಕ್ಕಂಡವೆ. ಅದಿಕೆ ಹೇಳ್ದು "ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ"ತ ನೀವು ಗ್ಯಾನ ಮಾಡ್ತಾವಳರಿ.

ಈ ಹುಚ್ಚ ಎಂತ ಹೇಳ್ತಾ ಉಟ್ಟು, ಮೇಲೆ ಬೋಗುಣಿತ ತಲೆ ಬರಹ ಬರ್ದುಟ್ಟು ಇಲ್ಲಿ ಚಾಣೆ ತಲೆ ಬಗ್ಗೆ ಬರಿತಾ ಉಟ್ಟುತಾ.ಹಂಗೆ ಅಲ್ಲ ಮಾರಾಯರೆ! ಮಾರಾಯ ತೇಳ್‌ಕನ ನಿಮಿಗೆ ಸಿಟ್ಟ್ ಬಾದು. ಮಾರಾಯ ತೇಳಿಕೆ ನಾವೇನ್ ಚಂಡೆ ಹೊಡೆಯುವುತಾ. ಇದೆ ವಿಷಯಕ್ಕೆ ನೋಡಿ ನನ್ನ ಹೆಣ್ಣ್‌ಗೂ ನೆರೆ ಮನೆವಂಗೂ ಜಗಳ ಆದ್ ನಮ್ಮ ಮನೆದ್ ಹೆಣ್ಣ್ ಮಕ್ಕ ಎಲ್ಲಾ ಸೇರಿ ಸ್ವಸಹಾಯ ಸಂಘದ ಮೀಟಿಂಗ್ ಮಾಡ್ತಿರ್‌ಕನ, ಅದ್ ಬ್ಯಾರೆ ಅವರ ಮನೆ ಅಂಗಳಲ್ಲಿ, ದುಡ್ಡು ಲೆಕ್ಕ ಮಾಡ್‌ಕನ ಸ್ವಲ್ಪ ಹೆಚ್ ಕಮ್ಮಿ ಅತ್, ಆಗ ಬಾಗ್‌ಲಲಿ ನಿಂತವ ಎಂತ ನಿಮಿಗೆ ದುಡ್ಡು ಲೆಕ್ಕ ಮಾಡಿಕೆ ಬಾದುಲೆ, ನೀವೆಲ್ಲಾ ಪುನಃ ಇಸ್ಕೂಲಿಗೆ ಸೇರೊಕುತ ಆಗ ನನ್ನ ಹೆಣ್ಣ್ ಹೇಳ್ತ್ ಯಾಕೆ ತೇಳಿರೆ ಅವುಳ್ದ್ ಪೆರಾಜೆ ಕಡೆ ಭಾಷೆ ಅದಿಕೆ. ಅವ ಸುರು ಮಾಡ್ತಲ್ಲಾ ನಾನೇನ್ ಮಾರಾಯ, ತೇಳಿಕೆ ಚಂಡೆ ಹೊಡೆವನಾ ಹಂಗೆ ಹಿಂಗೆತಾ. ಈಗ ಅಂವನ ಮನೆ ಮುಂದೆ ಕೂರ್ದು ಬುಟ್ಟು ದೊಡ್ಡ ಮನೆ ಮುಂದೆ ಅವರ್ದ್ ಅದ ಅರೆಭಾಷೆಲಿ ಸಂಘ ನಡ್ಸ್‌ವೆ

ಹೋಗಲಿ ಬುಡಿ ಈಗ ಬೋಗುಣಿ ತೇಳ್ದು ಹಿಂದೆನ ಕಾಲಂದ ನಮ್ಮ ಜನಾಂಗಲಿ ಬದ್‌ಕನ ಒಟ್ಟಿಗೆ ತಲತಲಾಂತರಂದ ಬಳಕೆ ಆಗ್‌ತಾ ಬಂದ ಕಂಚಿನ ಪಾತ್ರೆ. ಇದ್ ಪ್ರತಿ ಒಂದು ಮನೆಲಿ ಬೇಕು ತೇಳುವ ಕಾರಣಂದ ಮಗಳ ಮದ್‌ವೆ ಮಾಡಿ ಕೊಡ್‌ಕನ, ಕಂಚಿಮುಟ್ಟು ಸಾಮಾನ್‌ಗಳ ಜೊತೆಗೆ ಇದ್ ಇರ್ತಿತ್ತ್ ಇದರ ಉಪಯೋಗ ಮತ್ತೆ ಬಳಕೆ ಬಹಳ ದೊಡ್ಡದ್. ಈ ಬೋಗುಣಿ ಒಂದು ಮನೆಲಿ ಬಳ್ಸುವೆ ಹುಟ್ಟುಂದ, ಸಾಯುವ ವರೆಗೆ ಜಂಬರಲಿ ಬಳ್‌ಸುವೆ. ಕೂಸು ಹುಟ್ಟ್‌ಕನ ಅಂದರೆ ಹೆರಿಗೆ ಸಮಯಲಿ ನೀರ್ ತುಂಬಿಸಿಕಂಡ್ ಹತ್ರ ಸೂಲಗಿತ್ತಿ ಇಸಿಕಂಬತಿತ್ತ್. ಕೂಸ್‌ನ ಮೀಸ್‌ಕನ ಅಜ್ಜಿಕ ಮಣೆ ಮೇಲೆ ಕುದ್ದ್ ಕಾಲ್ ನೀಂಡಿ ಅದರ್ಲಿ ಕೂಸ್‌ನ ಅಂಗಾತ ಮುಂಗಾತ ಮಲ್ಗಿಸಿ ಬೋಗುಣಿಲಿ ಉಗುರ ಬೆಚ್ಚ ನೀರನ ಒಟ್ಟೆ ಚಿಪ್ಪಿಲಿ ಹೊಯ್ದ್ ಮೀಸ್‌ತಿತ್ತ್. ಹಿರಿಯರ್ನ, ಗುರುಗಳ್ನ ಮರದ ಎತ್ತರದ ಮಣೆಲಿ

ಕೂರ್ಸಿ ಅವರ ಕಾಲ್‌ನ ಬೋಗುಣಿಲಿ ಇರ್ಸಿ, ಕಾಲಿಗೆ ಚೊಂಬುಲಿ ನೀರ್ ಹೊಯ್ದ್, ತೊಳ್ದ್ ಪಾದ ಪೂಜೆ ಮಾಡ್ತಿದ್ದೊ. ಓದುವ ಮಕ್ಕ ಬೋಗುಣಿಲಿ ನೀರ್ ಹೊಯ್ದ್ ಕಾಲ್‌ಕಂತಿಸಿಕಂಡ್ ಓದಿರೆ ವಿದ್ಯೆ ತಲೆಗೆ ಹತ್ತಿದೆ ಗಡ. ಸಾಯಂಕಾಲ ಆಕನ ಮನೆ ಮುಂದೆ ಮೆಟ್ಲ್‌ಲಿ ಹಾಕಿದ ಕಲ್ಲ್ ಇಲ್ಲರೆ ಮನೆ ಹಿಂದೆ ಮೆಟ್ಲ್‌ಲಿ ಮಡ್‌ಗಿದ ಕಲ್ಲ್‌ಹತ್ರ ಬೋಗುಣಿಲಿ ಬಿಸಿ ಬಿಸಿ  ನೀರ್ ಹಾಕಿ, ಕೈಕಾಲ್ ಮಖ ತೊಳೆಯೊತಿದ್ದೊ. ಹಂಗೆನೆ ಒಳಗೆ ಬಾಡೆಲಿನೂ ಕೈಯಾಲೆಲಿನೂ ಮರದ ಕುರ್ಚಿಲಿ, ಇಲ್ಲೆರೆ ಮಣ್ಣ್‌ನ ತಿಂಟೆಲಿ ಕುದ್ದ್ ಬೋಗುಣಿಗೆ ಬಿಸಿ ನೀರ್ ಹೊಯ್ದ್ ಹಂಞ ಹೊತ್ತು ಕಾಲ್ ಕಂತಿಸಿ ಕುದ್ದ್ ಮತ್ತೆ ಹೊರಗೆ ತೆಗ್ದ್ ಕಾಲ್ ವರ್ಸ್ಸಿ ಮಲ್‌ಗಿರೇ ಒಳ್ಳೆ ನಿದ್ದೆ ಬಾತಿತ್ತ್ ಗಡ, ಹಂಗೆನೂ ಆರೋಗ್ಯಕೆ ಒಳ್ಳೆದ್‌ತಾ ಹೇಳುವೆ ಈಗ ಇದ್‌ಕೆಲ್ಲಾ ಪುರುಸೊತ್ತು ಇಲ್ಲೆ ಬಿಡಿ. ಹಂಡೆಲಿದ್ದ ಕಾದ ನೀರ್ ಹೊಯ್ಕಂಬುದು, ಚಂಡಿ ತೆಗ್ದ್ ಟಿವಿ ಮುಂದೆ ಕೂರ್ದೂ ಇನ್ನೊಂದು ಮಾಡುವೆ.

ಈಗನ ಹಂಗೆ ಹಿಂದೆನ ಕಾಲಲಿ ಕೈ ತೊಳಿಯಕೆ ಸಿಂಕ್, ಬೇಷನ್ ಇತ್ತ್‌ಲೆ ಊಟದ ಕೋಂಬರೆ ಮೂಲೆಲಿ ಒಂದು ಮೂರು ಕಾಲನ ನಿಲುವುಲಿ ಬೋಗುಣಿ ಇಸಿರೆ ಅದರ್ಲಿ ಕೈ ಬಾಯಿ ತೊಳ್ದ್ ಊಟಕ್ಕೆ ಕೂರ್ತಿದ್ದೊ, ಊಟ ಆದ ಮೇಲೆ ಕೈ ಬಾಯಿ ತೊಳ್ದ್ ಕಾಂಕ್ರ್ಸಿ ಅದಿಕೆ ಉಗೆತಿದ್ದೊ. ಬೆಳಿಗೆ ಅದರ್ನ ತಕಂಡ್ ಹೋಗಿ ದೂರ ಸೂಸುತ್ತಿದ್ದೊ ಕಕ್ಕೂಸು ಇಲ್ಲದ ಆಗನ ಕಾಲಲಿ ರಾತ್ರಿ ಎಲ್ಲಾ ವಯಸ್ಸಾದವು ಕೈ ಹೊರಗೆ ಹೋಕೆ ಭಂಜ ಅದೆತಾ ಅವರ ಕಟ್ಲ್ ಕೆಳಗೆ ಇಸ್‌ತ್ತಿದ್ದೂ. ಆಗ ಬ್ಯಾರೆ ಲೈಟ್‌ಗಿಯಿಟ್ ಇತ್ತ್‌ಲೆ ಹಾಳಾದ ಚಿಮ್ಮಿಣಿ ದೀಪ ಮಯ ಮಯತಾ ಗಾಳಿ ಬಾಕನ ಕೆಟ್ಟನೆ ಕೆಟ್ಟನೆತಾ ಸಣ್ಣಂಗೆ ಹೊತ್‌ತ್ತಿತ್ತ್. ಆ ಬೆಳ್ಕ್‌ಲಿ ದಾರಿಲಿ ಹಾವು, ಚೇಳ್ ಇದ್ದರೆ ಗೊತ್ತಾದೆನಾ, ಅದಿಕೆ ಹಂಗೇನಾರ್ ಒಂದು, ಎರ್ಡ್ ಬಾತ್ ತೇಳಿರೆ ದರಾತ ಕಟ್ಲ ಅಡಿಂದ ಬೋಗುಣೆ ಎಳ್ದ್, ಲಂಗೊಟಿ ಜಾರ್ಸಿ ಪುಸಕ್ಕತ ಅಲ್ಲೆ ಬುಡ್ದ್. ಮತ್ತೆ ಕತ್ತಲಾದರೆ ಮಕ್ಕಳ ಹೇಳೋಕೊ ಅಜ್ಜಿಕ ಗುಮ್ಮ ಕೊಲೆ, ಪೀಡೆತಾ ಕತೆ ಹೇಳಿ ಒಂದೂ ಮಕ್ಕ ಹೊರೆಗೆ ಹೋತಿತ್ತ್‌ಲೆ, ಹೊರೆಗೆ ಚುಂಬುತಕಂಡ್ ಹೋದರೆ ಬುಡಿ ಹಾಕುವೆ ನಾಯಿ, ಹಂದಿ ಕೂರಿಕೆ ಮುಂದೆ ನೂಕಿ ಹಾಕುವೆ. ಈ ಸುಟ್ಟವರ ಕಾಟಂದ ಇನ್ನೆಂತ ಮಾಡ್ದು, ಕೋಣೆದ್ ಮೂಲೆಲಿ ಬೋಗುಣಿ ಇಸಿ ಅಲ್ಲೆ ಕೂರ್ಸುದು. ಇನ್ನ್ ಕತ್ತಲೆಗೆ ಮಿಣುಪುಳಿ ಬಂದರೆ ಆತ್‌ಬುಡಿ ಅದರ್ನ ಯಾರ್‌ಸನ ಮುಟ್ಲುಲ್ಲೆ. ಯಾಕೆ ತೇಲಿರೆ ಮಿಣುಪುಳಿ ಮುಟ್ರೆ  ರಾತ್ರೆ

ಹೆಲ್ ಬಂದೆಗಡತಾ. ಈ ಎಲ್ಲಾ ನರ್ಕಲಿ ರಾತ್ರಿ ಹೇಲಿಕೆ ಉಚ್ಚೆ ಹೊಯಕೆ ಬೋಗುಣಿ ಬೇಕು. ಬೆಳಿಗೆ ಎಂತ ಮಾಡ್ದು ಒಲೆಂದ ಎತ್ತಿದ ಬೂದಿನ ಅದಿಕೆ ಸೊರ್ರುದು. ದೂರ ತಕಂಡ್ ಹೋಗಿ ಬಾಳೆಗುಂಡಿಗೆ ಹಾಕುದು ಆಗನ ಕಾಲಲಿ ಹಂಗೆ ಇತ್ತ ಅಣ್ಣ ಈ ತೋರಲಿತ ಅಜ್ಜಂದರ್ ಕೈ ರಟ್ಟೆ ತೊರ್ರುಸ್ತಿದ್ದೊ, ಬಾಳೆಕಾಯಿ ಗಾತ್ರನ. ಹುಲ್ಲು ಮನೆಗಳೆ ಜಾಸ್ತಿ ಇದ್ದ ಕಾಲ ನೋಡಿ ಆಗ. ಬೇಸಿಗೆ ಕಾಲಲಿ ಮಾಡಿಗೆ ಹಾರ್ದ ಕೋಳಿಗ ಕೇರಿ ಒಟ್ಟೆ ಅದಲ್ಲಿ ಮಳೆಗಾಲ ಸೋರ್‌ತಿತ್ತ್. ಅಂತ ಸೋರುವ ಜಾಗಲಿ ಬೋಗುಣಿ ಇಸಿ, ನೀರ್ ನೆಲಕ್ಕೆ ಬೀಳ್ದು ತಪ್ಪುಸ್‌ತ್ತಿದ್ದೊ. ಯಾರ್ ಇಲ್ಲದಿದ್ದರೆ ಸಣ್ಣ ಮಕ್ಕ ಹತ್ರ ಚಿಪ್ಪಿ ಬಿದ್ದಿದ್ದರೆ ಬೋಗುಣಿಂದ ನೀರ್ ಗೋಂಚಿ ಕುಡ್ದ್ ಬುಡ್ತಿದ್ದೊ ನೋಡಿ ಸುಟ್ಟ ಉರುಕೊಳ್ಳಿ ಕೂಸುಗ. ಕೋಳಿ ಪಿಳ್ಳೆಗಳಿಗೆತಾ ಮನೆ ಹಿಂದೆ ಕುಡಿಯಕೆ ನೀರ್ ಹೊಯ್ದ್ ಇಸಿರೆ, ಆಗ ಮನೆಲಿ ಮಕ್ಕ ಜಾಸ್ತಿ ಆಗ ಅಲ್ಲಿ ಈಗನ ಹಂಗೆ ಟಿವಿ, ಲ್ಯಾಪ್ ಟಾಪ್ ಮೊಬೈಲ್ ಕಂಪ್ಯೂಟರ್ ಬ್ಯಾರೆ ಇತ್ತಲೆ, ದೊಡ್ಡವೆಲ್ಲಾ ಗದ್ದೆಗೋ, ತೋಟಕ್ಕೊ ಮತ್ತೆಂತ ಹೊತ್ತಿದ್ದೊ, ಮಕ್ಕಳಿಗೆ ಮತ್ತೆಂದೋ ಕೆಲ್ಸಕ್ಕೆ ಹೊತ್ತಿದ್ದೋ, ಮಕ್ಕಳಿಗೇ ಮತ್ತೆಂತ್ತ ಕೆಲ್ಸ ಮಣ್ಣ್‌ಲಿಯೋ, ಹೊಣ್ಣೇಲಿಯೋ, ಆಟ ಆಗ ಈ ಬೋಗಣಿ ಸಿಕ್ಕಿರೆ ಸೌದೆಕೊಳ್ಳಿ ಕೊಟೆಗೆಂದ ಎಳ್ದ್ ತುಂಡು ಮಾಡಿ ಬೋಗುಣಿಗೆ ಬಡ್‌ಕಂಡ್ ಬಾಗಿಲ ತೆರೆಯಿರಿ ಬಿಕ್ಷೆಯ ನೀಡಿರಿ ಬಂದೆವು ನಾವು ತಿರುಕನಿಗೆ ಹಾಡ್ದು ಪ್ಯಾಂ ತೇಳಿ ಮಾಡ್ತಿದ್ದೊ, ಕುಣಿಯೋದು ಮಾಡ್ಡಿದ್ದೊ. ಕೆಲವು ಮಕ್ಕಳಿಗಂತೂ ಏಳ್‌ಗಿರಿ ಎಪ್ಪತ್ತು ಗಿರಿಯಿಂದ ಇಳ್ದ್ ವೆಂಕಟರಮಣ ದರ್ಶನನೆ ಬಾತಿತ್ತ್ ಕೆಲವು ಸಲ ಬೋಗುಣಿಲಿ ಇಸಿದ ನೀರಿಗೆ ಕೋಳಿ ಪಿಳ್ಳೆಗ ಬಿದ್ದ್ ಪಿಂಯೋ ಪಿಂಯೋ ತೇಳಿ ಒದ್ದಾಡಿ ಬೋಗುಣಿಂದ ಹಾರಿ ಓಡಿ ಹೇಂಟೆನ ರೆಕ್ಕೆ ಒಳಗೆ ಕೂರ್ತಿದ್ದೊ. ಇನ್ನ್ ಅಲ್ಲೇ ಇದ್ದ ಪಿಳ್ಳೆ ಸಿಕ್ಕಿರೆ ಅದನ್ನ ಮಕ್ಕ ಹಿಡ್ಕಂಡ್ ದಿದ್ದಿ ಮೀಯವ್ವತಾ ಮೀಸ್ ತಿದ್ದೋ. ಸಾಯಕಾದರೆ ಬಾಯಿಗೆ ನೀರ್ ಕುಡ್ಸು ತ್ತಿದ್ದೊ, ಹ್ಯಾಂಟೆ ಹಿಂದೆಂದ ಬಂದ್ ಮೆಟ್ಟ್‌ರನೆ ಕೈಯಿಂದ ಪಿಳ್ಳೆ ಬುಟ್ಟು ಹೋದು.

ಸಾವು ಮನೆಲಿ ಹೆಣ ಎತ್ತುವ ಕಾಲಕ್ಕೆ ಹೊರಗಡೆ ಅಂಗಳಲಿ ಬೋಗುಣಿಲಿ ನೀರ್ ತುಂಬುಸಿ ಮನೆ ಮುಂದೆ ಇಸ್‌ವೆ. ಮನೆವವು ಎಲ್ಲಾ ರಾಮ ರಾಮತ್ತೇಳಿ ಹೆಣಕ್ಕೆ ಸುತ್ತು ಬಂದು ಹೊರಗೆ ಅಂಗಳಕ್ಕೆ ಬಂದ್ ಎಡ್ದ್ ಕೈಲಿ ಕಾಲಿಗೆ ನೀರ್ ಹಾಕಂಡ್ ಮತ್ತೊಂದು ಸುತ್ತ್ ಬಂದ ಮೇಲೆ ಹೆಣನ ಎತ್ತಿ ತಂದ್ ಚಟ್ಟಕ್ಕೆ ಇಸುವೆ. ಅದಾದ ಮೇಲೆ ಮೂರರ ಶುದ್ಧಲಿ ಹೆಣ ಮಲ್ಗಿಸಿದಲ್ಲಿ ಮುಕ್ಕಾಲ್ ಮೇಲೆ ಬಾಳೆ ಎಲೆಲಿ

ಮುಗುಳಕ್ಕಿಗೆ ಅರಿಶಿಣ ಮುಕ್ಕಾಲ್ ಮೇಲೆ, ಬಾಳೆ ಎಲೆಲಿ ಮುಗುಳಕ್ಕಿಗೆ ಅರಿಶಿಣ ಮತ್ತೆ ಬಾಳೆಲೆಲಿ ಇಸಿ, ದೀಪ ಹೋಸಿ ಇಸಿದ್ದವೆ. ಮತ್ತೆ ಅಂದ್ ಹಂಗೆನೆ ಬೋಗುಣಿಲಿ ನೀರ್ ತುಂಬುಸಿ ಮಾಯ್‌ನ ಎಲೆ ಹಾಕಿದ್ದವೆ. ಅಂದ್ ಹಂಗೆನೆ ಸುತ್ತ್ ಬಂದ್ ಮತ್ತೆ ಸುಡುಕುಳಿಗೆ ಹೊರ್‍ಟವೆ.

ದಿನ ನಿತ್ಯದ ಬದ್‌ಕಲಿ ಬಳ್ಸ್ತಿದ್ದ ಈ ಬೋಗುಣಿ ಗೌಡಜನಾಂಗದೊಟ್ಟಿಗೆ ಅಂದ್, ಇಂದ್, ಮುಂದೆಗೂ ಬದ್ಕ್‌ಲಿ ಪದ್ಧತಿನ ಒಂದು ವಸ್ತು ಆಗಿ ಉಟ್ಟು. ಈ ಬೋಗುಣಿಲಿ ನೀರ್ ತುಂಬಿಕಂಡ್ ಹೆಚ್ಚಿಗೆ ದಿನ ಇದ್ದರೆ ಅದ್ ಒಂದು ತರದ ಹಸ್‌ರ್ ಬಣ್ಣಕ್ಕೆ ಬಂದದೆ. ಇದನ ಕಿಲುಂಬು ಹಿಡ್ಡದ್ ತೇಳುವೆ ಈ ಕಿಲುಂಬು ಹೋಕುತ್ತಾದರೆ, ಹುಣುಸುಳಿ, ನಿಂಬುಳಿರಸ, ಬೂದಿ ಯಾವುದಾದರ್ ಒಂದರ್‍ನ ಹುಲ್ಲುನ ಮುದ್ದೆ, ಕಾಯಿ, ಚೆಪ್ಪು ತಕುಂಡ್ ಲಾಯಿಕ ತಿಕ್ಕಿ ತೊಳ್ದರೆ ಫಳಫಳಾತ ಹೊಳ್ವಿದೆ. ಬೋಗುಣಿತೇಳಿರೆ ಗುಣಿ, ಅಂದರೆ ಕುಳಿ, ಗುಂಡಿಂತ ಅರ್ಥ ಅಂದರೆ ಅಗಲ ಬಾಯಿ ಇರುವ ಗುಂಡಿ ಪಾತ್ರೆ. ಕಡೆಗೆ ಈ ಕಥೆನ ಹೇಳೊಕು ನಿಮಿಗೆ ಒಂದು ನಲವತ್ತು ವರ್ಷದ ಹಿಂದೆ ನಮ್ಮ ಅವ್ವ ನಾ ಹಿಂದೆ ಹೇಳ್ದಂಗೆ ಕೊಳಿಪಿಳ್ಳಿ ನೀರ್ ಕುಡಿಯಕೆತ ಅಂಗಳಲಿ ನೀರ್ ಹೊಯ್ದ್ ಇಸ್‌ತ್ತಿತ್ತ್ ಅದರ್‍ನ ರಾತ್ರಿ ಎಲ್ಲಾ ತೆಗೆತಿತ್ತ್‌ಲೆ ಅದ್ ಅಲ್ಲೆ ಬಿದ್ದ್ ಇರ್ತಿತ್, ಅದ ಬ್ಯಾರೆ ನಮ್ಮ ಮನೆವೂ ಆಚೆ ಈಚೆ ಒಡಾಡುವ ದಾರಿ ಕತ್ತಲೆಗೆ, ಆ ಬೋಗುಣಿನ ಅಂಗಳಲಿ ಇಲ್ಲೇ, ಎಲ್ಲಾ ಅಲ್ಲಿ ಇಲ್ಲಿ ಹುಡುಕಿ ನೋಡ್ದೊ ಯಾರಾಪ್ಪ–ತಾ ಯೋಚನೆ ಮಾಡ್ರೆ ಪಕ್ಕಾತ ಅಂದಾಜಿ ಅತ್ ಇದ್ ನಮ್ಮ ಸಣಪನ ಮಂಜತ ಹಿಂದೆಲ್ಲಾ, ಹೇಳ್ತಿದ್ದೊ ಅದ್ ಅಜ್ಜಂದ ನಮ್ಮ ಪಾಲಿಗೆ ಬಂದ್‌ದತಾ. ಇರ್ಲ್ಲಿ ಬುಡಿ ಜಗಳ ಆಡಿಕೆ ನಮ್ಮಂದ ಅಕಿಲೆತ್ತಾ. ಇಂದಿಗೂ ನಮ್ಮ ಮನೆಲಿ ಬೋಗುಣಿ ಇಲ್ಲೆ, ನಾನ್ ಸಾಯಕೆ ಮುಂದೆ ಒಂದು ಬೋಗುಣಿ ತೆಗೆಯೋಕುತ ನಿಗಂಟ್ ಮಾಡ್ಯೊಳೆ.

**ತೆಕ್ಕಡ ಬಿ. ಕುಮಾರಸ್ವಾಮಿ**
ಮುತ್ತಾರ್ಮುಡಿ
9483234335

## 2021ರ ಜನವರಿಂದ ಮಾರ್ಚ್‌ನ ಕೊನೆಯವರೆಗೆ ಅಕಾಡೆಮಿ ಹಮ್ಮಿಕಂಡಿದ್ದ ಕಾರ್ಯಕ್ರಮ

1. ಜನವರಿ 1ರಂದ್ 17ರ ವರೆಗೆ ಕರ್ನಾಟಕದ ಬ್ಯಾರೆ ಬ್ಯಾರೆ ಕಡೆಲಿ ಅರೆಭಾಷೆ ನಾಟಕದ ರಂಗಪಯಣ ಆತ್. ಜನವರಿ 1ರಂದ್ ರಂಗಾಯಣ ಶಿವಮೊಗ್ಗಲಿ, 2ರಂದ್ ತೀರ್ಥಹಳ್ಳಿಲಿ, 3ರಂದ್ ಕೋಟೇಶ್ವರಲಿ, 4ಕ್ಕೆ ಬೈಂದೂರುಲಿ, 6 ಮತ್ತೆ 7ರಂದ್ ಆಳ್ವಾಸ್ ಶಿಕ್ಷಣ ಪ್ರತಿಷ್ಠಾನ, ಮೂಡುಬಿದ್ರೆಲಿ, 9ಕ್ಕೆ ಪುರಭವನ ಪುತ್ತೂರುಲಿ, 10ರಂದ್ ಸಂತ ಜೋಸೆಫರ ವಿದ್ಯಾಸಂಸ್ಥೆ ಆವರಣ, ಮಡಿಕೇರಿಲಿ, 13ರಂದ್ ಕೆ.ಎಸ್.ಎಸ್. ಕಾಲೇಜು, ಕುಕ್ಕೆ ಸುಬ್ರಹ್ಮಣ್ಯಲಿ, 15ರಂದ್ ರಂಗಾಯಣ ಮೈಸೂರುಲಿ ನಡ್ದ್, ರಂಗಪಯಣದ ಸಮರೋಪನ ರವೀಂದ್ರ ಕಲಾಕ್ಷೇತ್ರ, ಬೆಂಗಳೂರುಲಿ ಮಾರ್ಚ್ 17ರಂದ್ ಮಾಡ್ದೊ.

2. ಜನವರಿ 24ರಂದ್ ಕೊಡಗು ಗೌಡ ಸಮಾಜ, ಮಡಿಕೇರಿಲಿ ವಿಶ್ವಕೋಶದ ರಚನೆಗೆ ಸಂಬಂಧಪಟ್ಟಂಗೆ ಪೂರ್ವಭಾವಿ ಸಭೆನ ನಡ್ಸಿದೊ. ಹೆಸರಾಂತ ಸಾಹಿತಿಗ ಮತ್ತೆ ಪ್ರಾಧ್ಯಾಪಕದ ಹಾ ತಿ ಕೃಷ್ಣೆಗೌಡನವು ಸಂಪನ್ಮೂಲ ವ್ಯಕ್ತಿಯಾಗಿದ್ದೊ. ಜಂಭರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ.

3. ಫೆಬ್ರವರಿ 6ರಂದ್ ಬ್ಯಾರಿ ಸಾಹಿತ್ಯ ಅಕಾಡೆಮಿನ ಸಹಯೋಗಲಿ ಬಹುಭಾಷಾ ಸಾಂಸ್ಕೃತಿಕ ಸಂಭ್ರಮ ಜಂಭರನ ಕಾರವರದ ರಂಗಮಂದಿರಲಿ ನಡ್ಸಿದೊ.

4. ಫೆಬ್ರವರಿ 23ರಂದ್ ಕೊಡಗು ಗೌಡ ಮಹಿಳಾ ಒಕ್ಕೂಟದ ಕಛೇರಿಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಕೂಡ್‌ಕೂಟಲಿ 7 ದಿನಗಳ ಅರೆಬಾಸೆ ಸಂಸ್ಕೃತಿ ತರಬೇತಿ ಶಿಬಿರದ ಉದ್ಘಾಟನ ಸಮಾರಂಭನ ಮಾಡ್ದೊ.ಶಿಬಿರದ ಉದ್ಘಾಟನೆನ ಶ್ರೀಮತಿ ಅಂಬೆಕಲ್ಲು ಸುಶೀಲ ಕುಶಾಲಪ್ಪನವು ನೆರವೇರಿಸಿದೊ. ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷರಾದ ಶ್ರೀಮತಿ ಕುಂಜಿಲನ ಮುತ್ತಮ್ಮನವು ಮುಖ್ಯ ನೆಂಟ್ರಾಗಿ ಬಂದಿದೊ. ಶಿಬಿರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ. ಫೆಬ್ರವರಿ 29ರಂದ್ 7 ದಿನದ ಶಿಬಿರದ ಸಮೋರಪ ಜಂಬರ ನಡ್ತ್. ಸಮರೋಪ ಜಂಭರದ ನೆಂಟ್ರಾಗಿ ನಿವೃತ ಶಿಶು ಅಭಿವೃದ್ಧಿ ಕಲ್ಯಾಣ ಅಧಿಕಾರಿ ಧಮಯಂತಿ, ಕೊಡಗು ಗೌಡ ಸಮಾಜದ ಕಾರ್ಯದರ್ಶಿ ಕೋಡಿ ಚಂದ್ರಶೇಖರ, ಶಕ್ತಿ ಪತ್ರಿಕೆನ ಉಪಸಂಪಾದಕ ಕುಡೆಕಲ್ ಸಂತೋಷವು ಬಂದಿದೊ.

5. ಫೆಬ್ರವರಿ 24ರಂದ್ ಬುಧವಾರ ನೆಹರೂ ಮೆಮೋರಿಯಲ್ ಕಾಲೇಜ್, ಸುಳ್ಯಲಿ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘದ ಉದ್ಘಾಟನೆ ಜಂಭರನ ಏರ್ಪಡಿಸಿದೊ. ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ(ರಿ), ಸುಳ್ಯ ಇದರ ಆದ್ಯಕ್ಷರಾದ

ಡಾ.ಕೆ.ವಿ.ಚಿದಾನಂದನವು ಸಂಘದ ಉದ್ಘಾಟನೆನ ಮಾಡ್ದೊ. ಮುಖ್ಯ ನೆಂಟ್ರಾಗಿ ಡಾ. ಪೂವಪ್ಪ ಕಣಿಯೂರು, ಪ್ರಾಂಸುಪಾಲರ್, ನೆಹರೂ ಮೆಮೋರಿಯಲ್ ಕಾಲೇಜ್, ಸುಳ್ಯ ಮತ್ತೆ ಕನ್ನಡ ಉಪನ್ಯಾಸಕ ಶ್ರೀ ಸಂಜೀವ ಕುದ್ಪಾಜೆ ಇವು ಬಂದಿದೊ. ಜಂಭರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ.

6. ಮಾರ್ಚ್ 8ರಂದ್ ಸೋಮವಾರ ಕರ್ನಾಟಕ ಅರೆಭಾಷೆ ಸಂಸ್ಕ್ರತಿ ಮತ್ತೆ ಸಾಹಿತ್ಯ ಅಕಾಡೆಮಿ, ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘ, ಐ.ಕ್ಯೂ.ಎ.ಸಿ ಘಟಕ ಮತ್ತೆ ಕನ್ನಡ ವಿಭಾಗ, ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ, ಸುಬ್ರಹ್ಮಣ್ಯಲಿ ಕಾಲೇಜ್ ಮಕ್ಕಳಿಗೆ ಬರವಣಿಗೆ ಹೇಳಿಕೊಡ್ವ ಲೇಖನ ಕೌಶಲ್ಯ ಕಾರ್ಯಗಾರನ ನಡ್ಸಿದೊ. ಕಾರ್ಯಗಾರನ ಖ್ಯಾತ ಬರಹಗಾರ ಶ್ರೀ ವಸುಧೇಂದ್ರನವು ಉದ್ಘಾಟಿಸಿದೊ ಮತ್ತೆ ಕಾರ್ಯಗಾರದ ಸಂಪನ್ಮೂಲ ವ್ಯಕ್ತಿ ಆಗಿ ನಡ್ಸಿಕೊಟ್ಟೊ. ಕಾಲೇಜ್‌ನ ಪ್ರಾಂಶುಪಾಲರ್ ಆದ ಪ್ರೊ ಉದಯ್ ಕುಮಾರ್‌ವು ಮುಖ್ಯ ನೆಂಟ್ರಾಗಿ ಬಂದಿದೊ. ಕಾರ್ಯಗಾರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕ್ರತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ.

7. ಮಾರ್ಚ್ 21ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಛೇರಿಲಿ ವಿಶ್ವಕೋಶ ರಚನೆ ಸಂಬಂಧ ಸಭೆನ ನಡ್ಸಿದೊ. ಸಭೆನ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ. ಸಭೆಲಿ ಅಕಾಡೆಮಿನ ಎಲ್ಲಾ ಸದಸ್ಯರ್ ಭಾಗವಹಿಸಿದೊ. ವಿಶೇಷ ನೆಂಟ್ರಾಗಿ ಡಾ. ಶ್ರೀಧರ ಹೆಗ್ಡೆ, ಡಾ ಕೋರನ ಸರಸ್ವತಿ, ವಿನೋದ್ ಮೂಡಗದ್ದೆ, ಶ್ರೀ ನಾಗೇಶ್ ಕಾಲೂರು ಮತ್ತೆ ಶ್ರೀಯುತ ಬಾರಿಯಂಡ ಜೋಯಪ್ಪನವು ಬಂದಿದೊ.

8. ಮಾರ್ಚ್ 25ರಂದ್ ಗುರುವಾರ, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜ್, ಮಡಿಕೇರಿಲಿ ಕಾಲೇಜ್ ಮಕ್ಕಳಿಗೆ ಬರವಣಿಗೆ ಹೇಳಿಕೊಡ್ವ ಲೇಖನ ಕೌಶಲ್ಯ ಕಾರ್ಯಗಾರನ ನಡ್ಸಿದೊ. ಕಾರ್ಯಗಾರನ ಖ್ಯಾತ ಬರಹಗಾರ ಶ್ರೀ ವಸುಧೇಂದ್ರನವು ಉದ್ಘಾಟಿಸಿದೊ ಮತ್ತೆ ಕಾರ್ಯಗಾರದ ಸಂಪನ್ಮೂಲ ವ್ಯಕ್ತಿ ಆಗಿ ನಡ್ಸಿಕೊಟ್ಟೊ. ಡಾ. ಜಗತ್ ತಿಮ್ಮಯ್ಯ, ಪ್ರಾಂಶುಪಾಲರ್, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜ್ ಇವು ಮುಖ್ಯ ನೆಂಟ್ರಾಗಿ ಬಂದಿದೊ. ಕಾರ್ಯಗಾರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ವಯಿಸಿಕೊಂಡಿದ್ದೊ. ಅಕಾಡೆಮಿನ ಸದಸ್ಯರ್ ಆದ ಬೈತಡ್ಕ ಜಾನಕಿ ಬೆಳ್ಯಪ್ಪ, ಅಗೋಳಿಕಜೆ ಧನಂಜಯ, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಡಾ ದಯಾನಂದ ಕೂಡಕಂಡಿ ಮತ್ತೆ ಶ್ರೀ ಪುರುಷೋತ್ತಮ ಕಿರ್ಲಾಯವು ಇದ್ದೊ.

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್

HINGARA Arebhashe Quarterly Volume-4, Issue-6
Date : 31-03-2021 Kodagu KARARB/2016/69571 Price : Rs. 20/- Pages : 80




ರಂಗಾಯಣ ಶಿವಮೊಗ್ಗಲಿ ನಡ್ದ ಅರೆಬಾಸೆ ರಂಗಪಯಣದ ಉದ್ಘಾಟನೆ



ಬೈಂದೂರುಲಿ ನಡ್ದ ಅರೆಬಾಸೆ ರಂಗಪಯಣ




ಪುತ್ತೂರುಲಿ ನಡ್ದ ಅರೆಬಾಸೆ ರಂಗಪಯಣ




ಮೈಸೂರುನ ರಂಗಾಯಣಲಿ ನಡ್ದ ಅರೆಬಾಸೆ ನಾಟಕದ ಉದ್ಘಾಟನೆ